27

1


# ಪಂಚಮ

ಸಂಪುಟ: 8 ಅಕ್ಟೋಬರ್ 5, 1984 ಬೆಲೆ 1-00 ಸಂಚಿಕೆ: 19


ಭಾರತೀಯ ಸಾಹಿತ್ಯ ಚರಿತ್ರೆಯ ನಡಿಗೆಗೆ ತನ್ನ ಒಡಲಾಳದ ಹೂಹೃದಯ ಮುಡಿಸಲು ಹುಟ್ಟಿರುವ ದೇವನೂರ ಮಹಾದೇವರ 'ಕುಸುಮಬಾಲೆ' ಯಿಂದ ಈ ಅಮಾಸನನ್ನು ಹಿಡಿದುಕೊಡುತ್ತಿದ್ದೇವೆ. 'ಕುಸುಮಬಾಲೆ' ಕೃತಿಯು ಇಷ್ಟರಲ್ಲೇ ಹೊರಬರಲಿದೆ.

–ಸಂಪಾದಕ

## ದೇವನೂರ ಮಹಾದೇವ ವಿರಚಿತ ಕಥಾಕಾವ್ಯ

## 'ಕುಸುಮಬಾಲೆ'

# ಜಗದೇಕವೀರ ಅಮಾಸನ ಮರುಪ್ರವೇಶ

...ನಂಜಲಗೂಡ ಕಡೇಲಿಂದ ಹೊಲಾರ ಅಮಾಸನು ಬಾಡುಗ ಸೈಕಲ್ನಲ್ಲಿ ಅದರ ಹ್ಯಾಂಡಲ ಹಿಡುಕಳ್ದೇನೆ ಕಯ್ಯ ಹಿಂದ್ಕಮುಂದ್ಕ ಬೀಸ್ತ ಆ ಸೈಕಲ್ಲೂ ನಲೀಸ್ತ ತಾನೂ ನಲೀತಾ ಊರದಿಕ್ಕ ಬರುತ್ತಿದ್ದನು.

ಕುಣೀತ ಬೆಳೆದ ಅಮಾಸನ ಆ ಬಾಡ್ಗ ಸೈಕಲ್ನ ಹ್ಯಾಂಡಲ್ನಲ್ಲಿ ಸದಾ ಇರುತ್ತಿದ್ದ ಗೋಣಿ ಚೀಲ್ದ ಒಳಗಿದ್ದುದ 'ಯಾನುಡ ಅದು' ಅಂತ ಯಾರಾರು ಕೇಳುದ್ರ 'ಐ ಚರ್ಮ ಕನ್ನಿ ಬುದ್ದೇಳ' ಅಂತಿದ್ದನಾದರೂ

ಅವು ಚರ್ಮವಾಗಿರದೆ ಮುಟ್ಟಿನ ಸ್ಯಾಲವಾಗಿದ್ದವು. ಮುಟ್ಟಿನ ಸ್ಯಾಲ ಸಂಪಾದನ ಕಾಯಕದ ಯಶಸ್ಸಿಗಾಗಿ ಅಮಾಸನು ನೂರರವರೆಗೂ ನಂಬರ್ ಬರೆಯೋದು ಗುರುತಿಸೋದು ಕಲ್ತು ಅದನ್ನು ಜೋತಿಸಿಗಳ ಮಂತ್ರದ ಅಂಕಿಯಂತೆ ಬಳುಸ್ತಾ

ಊರಲ್ಲಿ ಯಾವಾವ ಹಟ್ಟಿಯಲ್ಲಿ ಯಾವಾವ ಹೆಂಗಸು ಯಾವಾವ ದಿನವು ಮುಟ್ಟಾಗುವಳು ಎಂಬುದರ ಒಂದು ಕರಾರುವಾಕ್ಕಾದ ಪಂಚಾಂಗವನ್ನು ರಚಿಸಿಕೊಂಡಿದ್ದನು. ಮಾರಾಜರೇ ನಂಬುವ ಒಂಟಿಕೊಪ್ಪಲ್ ಪಂಚಾಂಗ ಸುಳ್ಳಾದರೂ ಅಮಾಸನ ಪಂಚಾಂಗವು ಯಾರ್ದಾರು ಪ್ರಕೃತಿ ಯತ್ಯಾಸದಿಂದಾಗಿ ಹೆಚ್ಚೆಂದರೆ ಒಂದು ದಿನ ಹೆಚ್ಚೂಕಮ್ಮಿಯಾಗುತ್ತಿತ್ತೊ ಪರಂತು ನಿಜ ಆಗುತ್ತಿತ್ತು.

ಈ ನಿಜುವ ಹಿಡುದು, ನಿದ್ದವು ತೂಕಡಿಸುವ ಕಾಲದ ಅಧ್ಯಯನ ಮಾಡಿ ಅರಿತವನಾದ ಅಮಾಸನು ಆ ವ್ಯಾಳದಲ್ಲಿ ಎಲ್ಲೆಲ್ಲಿಗ ಭೇಟಿ ನೀಡಬೇಕೊ ಅಗತ್ಯವಾದ ಅಲ್ಲಲ್ಲಿಗಷ್ಟೆ ಚಣಮಾತ್ರದ ಭೇಟಿ ನೀಡಿ ಸೂರಡಿ ಸಿಕ್ಕಿಸಿರುತ್ತಿದ್ದ ಮುಟ್ಟಿನ ಸ್ಯಾಲಗಳ ಮಾಯ ಮಾಡ್ತ ಸಾಕಷ್ಟು ಸ್ಯಾಲಭಾಗ್ಯ ಪಡೆದವನಾಗಿದ್ದು ನೇಮನಿಷ್ಠೆಗೆ ಹೆಸರಾದ ಮ್ಯಾಗಲಕೇರಿ ಜುಮ್ಮ ಗಳಿಗೆಲ್ಲ ಇದು ಯಾತರ ಕೆಲ್ಸ ಎಂಬುವ ಅರಿವಾಗಿಸದೆ ದಿಕ್ಕೆಡಿಸಿದ್ದನು.

ಸ್ವಪ್ರತಿಭೆಯಿಂದ ಈ ಕಾಯಕವನ್ನು ಕಂಡು ಹಿಡುದವನಾಗಿ ಅದನ್ನು ನೇಮನಿಷ್ಠೆಯಿಂದ ಆಚರಿಸುತ್ತಿದ್ದ ಅಮಾಸನು ಅಂದು ಸಿಕ್ಕಿದ ಸ್ಯಾಲಗಳನ್ನು ಅಂದೇ ಫ್ರೆಸ್ಸಾಗಿ ಬಿಕರಿ ಮಾಡಲು ನೇರವಾಗಿ ನಂಜಲಗೂಡ ಹೊಳೆ ತಲುಪಿ ಅಲ್ಲಿ ಅಗಸನ ಯಾಸದಲ್ಲಿ ಆ ಸ್ಯಾಲಗಳಿಗ ಅಂಟಿದ್ದಿರಬಹುದಾದ್ದ ಹಸನುಮಾಡಿ ಅಡ್ವಾನ್ಸ್ ಕೊಟ್ಟಿದ್ದ ಸಾಬರಿಗೆ ನಿಯತ್ತಿನಲ್ಲಿ ಮಾರುತ್ತಿದ್ದನು.

ಅಮಾಸನ ಈ ಕಾಯಕವು ಕೂಲಿ ಮಾಡುವುದಕ್ಕಿಂತಲೂ ಹೆಚ್ಚು ಲಾಭದಾಯಕವಾಗಿದ್ದಾಗಿಯೂ ಅನಿಶ್ಚಯತೆ ಇಲ್ಲದ್ದಾಗಿಯೂ ಹಾಗೂ

ಯಾರಿಗಾರು ಮುಟ್ಟುನಿಂತು ಆಗುವ ಲುಕ್ಸಾನಿಗೆ ಹೊಸ ಗಿರಾಕಿಯನ್ನು ಪ್ರಕೃತಿಯು ಕೊಡಿಸಿಕೊಡುತ್ತಿದ್ದದೆಸೆಯಿಂದಾಗಿ ಅದು ಅಲ್ಲಲ್ಲಿಗ ಸಮನಾಗಿ

ಇದು ಅಮಾಸನ ಹೊಟ್ಟಬಟ್ಟ ಸಿನಿಮಾ ಬೀಡಿ ಸೈಕಲ್‌ಬಾಡ್ಗಗೂ ಆಗಿ ಮಿಕ್ಕಿದ್ದು ಮಾರಿಗುಡಿಲಿ ಇವನ್ನ ನೆಚ್ಕಂಡು ಬಾಯಿ ಬುಟ್ಗಂಡಿದ್ದ ಈಗ ಲಕ್ವವನ್ನೂ ಹೊಡೆಸಿಕೊಂಡು ನೆಲಕ್ಕ ಅಂಟುಕೊಂಡಿದ್ದ ಕುರಿಯಯ್ಯಗ ಗಂಜಿನೀರ ಕಾಣಿಸುತ್ತಿತ್ತು.

ಯಾವ ಪ್ರಕಾರವಾಗಿ ಸೈಕಲ್‌ಮ್ಯಾಲ ಬರುತ್ತಿದ್ದ ಅಮಾಸನು ಯಾರ ಕಣ್ಣುಗ ಬೀಳುವಂತವನಾದನೆಂದರೆ, ಮಠದ ಒಂದ್ಕಡ ಪಡಸಾಲದಲ್ಲಿ ಇಸ್ಪೀಟು ಆಡ್ತ ದುಡ್ಡುಕಾಸು ಹೊಡ್ದು ಗೋರಾಕಿಕೊಂಡಿದ್ದವನ ಕಣ್ಣುಗ ಬೀಳುವಂತವನಾದನು.

ಈಗ ತನ್ನ ಕಾಲ್ಬುಳಿ ಗುಡ್ಡವಾಗಿ ಬಿದ್ದಿದ್ದಂಥ ಶ್ರೀಲಕ್ಷ್ಮಿಯ ಚಂಚಲತವ ಅರಿತವನಾದ ಅವನು ಈಗ ಯಾವುದಾರು ನೆಪ ತಗುದು ಆಟ ನಿಲ್ಸಕ ಅವ ಕಣ್ಣಿಯ ಬೀಡಿ ಹಚ್ಗಳೆ ಅಸ್ಟು ಬೆಂಕಿ ಕಡಿಸಿ ಹಲ್ಮುಡ್ಯ ಖಿಚ್ಗಂಡೂ "ನೋಡ್ರುಡಾ ನೋಡ್ರುಡಾ ಹೊಟ್ಗ ಹಿಟ್ಟಿಲ್ದೆ ಇದ್ರೂ ಆ ಹೊಲೀನ ಕೊಬ್ಬಾ. ನಾವು ನೋಡ್ಲಿ ಅಂತ್ಲಿಯಾ ಹಾವ್ನ ಥರ ನಲೀಸ್ತ ಬತ್ತಾ ಅವ್ನಲ್ಲಾ.....ಬಡ್ಡೇದ್ನ ಗಹ್ಯಾಂಡಲ ಹಿಡ್ಕಳಕ ಆಗಬಾರ್ದಂಗ ಅವ್ನ ಆ ಐಡು ಮುಂಗೈನಿಗ ಕತ್ತರ್ಸಿ ಅತ್ತಾಗೊಂದು, ಇತ್ತಾಗೊಂದು ಎಸ್ದುಬುಟ್ರೀಗಪ್ಪ...." ಅಂತ ಬಾಯೊಳಗಲ ಹಲ್ಲುಗಳನ್ನಾಗ ನೊರಗುಟ್ಟಿಸಿದನು.

ಆಟ ದೊಡ್ಡದು....



ಕೊಡುಗೆ: ಶ್ರೀ ದೇವನೂರ ಮಹಾದೇವ ದಿನಾಂಕ 23.06.2006

# ಎಲ್ಲ ಜ್ಞಾನಕ್ಕೂ ಮೂಲ ಅಕ್ಷರ ಜ್ಞಾನ, ಕಡ್ಡಾಯವಾಗಿ ಅಕ್ಷರ ಕಲಿಯಿರಿ

ಅಭಿವೃದ್ಧಿಯ ಹಾದಿಯಲ್ಲಿ ಅನಕ್ಷರತೆ ಒಂದು ದೊಡ್ಡ ಆತಂಕ. ಇದನ್ನು ತೊಡೆದು ಹಾಕಲು ಸರ್ಕಾರ ಎರಡು ರೀತಿಯಲ್ಲಿ ಪ್ರಯತ್ನಿಸುತ್ತಿದೆ.

1 ಕಡ್ಡಾಯ ಪ್ರಾಥಮಿಕ ಶಿಕ್ಷಣ

2 ವಯಸ್ಕರ ಶಿಕ್ಷಣ

ಈಗ ರಾಜ್ಯದ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲಾ ಸೌಲಭ್ಯವಿದೆ. ಐದು ವರ್ಷ ಹತ್ತು ತಿಂಗಳು ತುಂಬಿದ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುವುದು ಪೋಷಕರ ಪ್ರಥಮ ಕರ್ತವ್ಯ.

ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದ 15 ರಿಂದ 30 ವರ್ಷದೊಳಗಿನ ವಯಸ್ಕರಿಗೆ ಅಕ್ಷರ ಮತ್ತು ವೃತ್ತಿಜ್ಞಾನ ನೀಡಲು ವಯಸ್ಕರ ಶಿಕ್ಷಣ ಸೌಲಭ್ಯ ಇದೆ. ಈ ಸೌಲಭ್ಯ ಪಡೆಯಲು ತಾಲ್ಲೂಕಿನ ವಯಸ್ಕರ ಶಿಕ್ಷಣ ಕಾರ್ಯಕರ್ತರು ಅಥವಾ ಸಹಾಯಕ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ.

ಮಾನವನ ಬದುಕಿಗೆ ಅಕ್ಷರಜ್ಞಾನ ಅತ್ಯಂತ ಅಗತ್ಯ, ಅದನ್ನು ತಪ್ಪದೆ ಸಂಪಾದಿಸಿಕೊಳ್ಳಿ.

ಪ್ರಕಟಣೆ: ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ.

# ರಾಮಾಯಣದ ಹುಟ್ಟು ಶೋಕ ಸ್ಲೋಕದ ಪಾಠ




## ವಿಶ್ಲೇಷಣೆ–೨

ರಾಮಾಯಣದ ಹುಟ್ಟಿಗೆ ಕಾರಣವಾದ ಶ್ಲೋಕ ಇದು :

"ಮಾ ನಿಷಾದ ಪ್ರತಿಷ್ಠಾಂತ್ವಮಗಮಶ್ಶಾಶ್ವತೀ ಸ್ಸಮಾಃ
ಯತ್ಕ್ರೌಂಚ ಮಿಥುನಾದೇಕಮವಧೀಃ"

"ಎಲೈ ಬೇಡನೆ! ನೀನು ಈ ಕ್ರೌಂಚ ಪಕ್ಷಿಗಳ ಮಿಥುನದಲ್ಲಿ ಕಾಮಮೋಹಿತವಾದ ಗಂಡು ಪಕ್ಷಿಯನ್ನು ಕೊಂದೆಯಾದ್ದರಿಂದ ಬಹಳ ದಿನ ಭೂಮಿಯಲ್ಲಿರಬೇಡ"

ವಾಲ್ಮೀಕಿ ಬೇಡನನ್ನು ಕುರಿತು ಆಡಿದ ಈಶ್ಲೋಕವನ್ನು ರಾಮಮೂರ್ತಿಯವರು ವಿಶ್ಲೇಷಿಸಿದ್ದಾರೆ. ಆ ಬಗೆಗೆ ಅವರ ಅಭಿಪ್ರಾಯವನ್ನು ಹೀಗೆ ಸಂಗ್ರಹಿಸಬಹುದು : (1) ಪ್ರಾಣಿಗಳನ್ನು ಕೊಲ್ಲುವುದು ಬೇಡನ ಧರ್ಮ ; ಆದ್ದರಿಂದ ವಾಲ್ಮೀಕಿಯ ನಡತೆ ಸಂಗತವಾದದ್ದಲ್ಲ ; 'ಮಹಾಮುನಿ', 'ಸಂಯಮಿ' ಯಾದ ವಾಲ್ಮೀಕಿಯ ಅಸಂಯಮದಿಂದ ಬಂದ ಈ ಶಾಪ, "ವ್ಯಾಧನ ಕ್ರಿಯೆಯ ಹಿಂದುಮುಂದರಿಯದೆ....ಇಂತಹ ವಿಪರೀತ ಅಮಾನುಷ ಶಿಕ್ಷೆ ಕೊಡುವುದು ನಿಜವಾದ ಕ್ರೌರ್ಯ." (2) ಕಾಮ ಮೋಹಿತವಾದ ಪಕ್ಷಿಮಿಥುನದಲ್ಲೊಂದನ್ನು ಕೊಲ್ಲುವುದರ ಮೂಲಕ 'ರತಿಭಂಗ' ಮಾಡಿದ ಬೇಡನ ಕೃತ್ಯ ಪಾಪ ಎಂಬುದಷ್ಟೇ ವಾಲ್ಮೀಕಿ ಶಾಪಕೊಡಲು ಕಾರಣ ; ಇಂಥ ಸಂದರ್ಭಗಳು ರಾಮಾಯಣ ಮಹಾಭಾರತಗಳಲ್ಲಿ ಹಲವಾರಿವೆ ; ಮೃಗರೂಪದಿಂದ ಸಂಭೋಗನಿರತವಾಗಿದ್ದ ಕಿಂದಮಮುನಿ ಯುಗ್ಮದಲ್ಲಿ ಮುನಿಯನ್ನು, ಪಾಂಡು ರಾಜ ಕೊಂದದ್ದು, ಆದರಿಂದ ಅವನಿಗೆ ಬಂದ ಮುನಿಯ ಶಾಪ, ಇಡೀ ಮಹಾಭಾರತದ ದುರಂತಕ್ಕೆ ಕಾರಣವಾಗುತ್ತದೆ, ಹಾಗೆಯೇ ಕ್ರೌಂಚಮಿಥುನದ 'ರತಿಭಂಗ'ದ ಮಹಾಪಾತಕ ರಾಮಾಯಣದಲ್ಲಿನ ಹತ್ಯಾಕಾಂಡಕ್ಕೆ ಕಾರಣವಾಗುತ್ತದೆ ; "ಭಾರತೀಯ ಸಂಸ್ಕೃತಿಯ ಪರಮ ಮೌಲ್ಯ ಪ್ರೇಮವಿದ್ದಂತಿಲ್ಲ ; ಕಾಮವಿದ್ದಂತಿದೆ ;... ಪ್ರೇಮವು ಭಾವವಾಗಿಯಾಗಲಿ, ರಸವಾಗಿ ಆಗಲಿ, ಸಂವೇದನೆಯಾಗಿ ಆಗಲಿ, ಪ್ರಾಮುಖ್ಯವನ್ನು ಪಡೆದಿಲ್ಲ." (3) "ಶೋಕವೇ ಶ್ಲೋಕವೆನಿಸಿಕೊಂಡು ಸುದ್ದಿಯಾದ ಈ ಶ್ಲೋಕದಲ್ಲಿ ಶೋಕದ 'ಅಯ್ಯೋ' ಎನ್ನುವ ಉದ್ಗಾರವಾಗಲೀ, ಕರುಣೆಯ ಒಂದೇ ಒಂದು ಸ್ವರವಾಗಲಿ ಸುಳಿದಿಲ್ಲ....ಇದನ್ನು ನುಡಿದೊಡನೆಯೆ ಆ ನುಡಿಯ ಛಂದೋಬಂಧದ ಚಂದವನ್ನು ಚಪ್ಪರಿಸುತ್ತಾನೆ-ಒಬ್ಬ *aesthete*ನಂತೆ, 'ರಸಿಕ'ನಂತೆ : ಕವಿಯಂತಲ್ಲ !....ತಾನು 'ವ್ಯಾಧ'ನಿಗೆ ಮಾಡಿದ ಮಹಾ ಹಿಂಸೆಯ ಬಗ್ಗೆಯಾಗಲೀ ಸಂಗಾತಿಯನ್ನಗಲಿದ ಕ್ರೌಂಚವಿಧವೆಯ ಬಗ್ಗೆಯಾಗಲಿ ಅನುಕಂಪ, ಅಂತಃಕರಣ, ನೋವು, ಪಶ್ಚಾತ್ತಾಪ, ಕರುಣೆ, ಶುದ್ಧಾಂಗವಾಗಿಲ್ಲವೇ ಇಲ್ಲ....ಆದಿಶ್ಲೋಕದಲ್ಲಿ ಶೋಕವಿಲ್ಲ ; ಕೋಪವಿದೆ, ಶಾಪವಿದೆ, ತಾಪವಿದೆ-ಅನುತಾಪ, ಪರಿತಾಪ, "ಸಂತಾಪಗಳಿಲ್ಲ ; ಹಿಂಸೆಯಿದೆ ಕರುಣೆಯಿಲ್ಲ ; ಕಾಮವಿದೆ ಪ್ರೇಮವಿಲ್ಲ."

ಆ ಶ್ಲೋಕವನ್ನು ಕುರಿತ, ಮೇಲಿನ ರಾಮಮೂರ್ತಿಯವರ ಅಭಿಪ್ರಾಯಗಳೆನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳಲಾರೆ. ಆ ಶ್ಲೋಕ ವಾಲ್ಮೀಕಿಯಿಂದ ಬಂದ ಸಂದರ್ಭವನ್ನು ಈಗ ಗಮನಿಸೋಣ. ವಾಲ್ಮೀಕಿ ಸಂಕ್ಷೇಪವಾಗಿ ನಾರದನಿಂದ ರಾಮಾಯಣವನ್ನು ಕೇಳಿದ್ದಾನೆ. ಮಧ್ಯಾಹ್ನಿಕಕ್ಕಾಗಿ, ಗಂಗಾನದಿಯ ಸಮೀಪದ ತಮಸಾ ನದಿಯ ತೀರಕ್ಕೆ ಶಿಷ್ಯನಾದ ಭರದ್ವಾಜನೊಂದಿಗೆ ಬಂದಿದ್ದಾನೆ. ಅದಕ್ಕಾಗಿ ತಕ್ಕ ಸ್ಥಳ ಹುಡುಕುತ್ತಿದ್ದಾನೆ. ಆಗ, ಇಂಪಾದ ಧ್ವನಿ ಮಾಡುತ್ತಿರುವ ಕ್ರೌಂಚಪಕ್ಷಿಗಳ ಜೋಡಿಯನ್ನು ನೋಡುತ್ತಾನೆ : ಋಷಿ ಅವುಗಳಿಗೆ ಮಾರುಹೋಗಿ ನೋಡುತ್ತಿದ್ದಂತೆಯೆ, ಬೇಡನೊಬ್ಬ, ವಾಲ್ಮೀಕಿಯನ್ನು ಕಂಡೂ, ಅವನನ್ನು ಲಕ್ಷಿಸದೆ, ಗಂಡು ಪಕ್ಷಿಯನ್ನು ಹೊಡೆದುರುಳಿಸುತ್ತಾನೆ : ಸದಾ ತನ್ನನ್ನಗಲದೆ ಸಂಚರಿಸುತ್ತಿದ್ದ, ಈಗ ರಕ್ತಸಿಕ್ತವಾಗಿ ನೆಲದಲ್ಲಿ ಹೊರಳಾಡುತ್ತಿರುವ ಗಂಡುಪಕ್ಷಿಯನ್ನು ಹೆಂಡತಿಯಾದ (ಭಾರ್ಯಾತು) ಹೆಣ್ಣುಪಕ್ಷಿಯು ಕಂಡು, ಅದರ (ಪತಿ) ಅಗಲಿಕೆಯನ್ನು ಸಹಿಸಲಾರದೆ ದೀನಧ್ವನಿ




ಯಿಂದ ಅರಚುತ್ತದೆ. ನಿಷಾದನಿಂದ ಕೊಲ್ಲಲ್ಪಟ್ಟ ಆ ಗಂಡು ಪಕ್ಷಿಯನ್ನು ನೋಡಿ ಧರ್ಮಾತ್ಮನಾದ (ಧರ್ಮಾತ್ಮನಃ-ರಾಮಾಯಣದ್ದೆ ಪದ ಇದು) ವಾಲ್ಮೀಕಿ ಋಷಿಗೆ 'ಕಾರುಣ್ಯ' (ಇದೂ ರಾಮಾಯಣದ್ದೆ ಪದ, ರಾಮಮೂರ್ತಿಯವರೆನ್ನುವಂತೆ ಮಾಸ್ತಿಯವರದ್ದಲ್ಲ) ಉಕ್ಕಿ ಹರಿಯುತ್ತದೆ ; ಅನಂತರ ಅಳುತ್ತಿರುವ (ರುದತೀಂ) ಕ್ರೌಂಚಪಕ್ಷಿಯನ್ನು ಕಂಡು, ದಯಾವಂತನಾದುದರಿಂದ (ಕರುಣವೇದಿತ್ವಾನ್), ಇದು ಅಧರ್ಮವೆಂದು ತಿಳಿದು ಆ ಮಾತುಗಳನ್ನಾಡುತ್ತಾನೆ ವಾಲ್ಮೀಕಿ.

"ರತಿಕ್ರೀಡಾಸಕ್ತವಾದ ಪ್ರಾಣಿಯನ್ನು ಹೊಡೆಯಬಾರದ್ದು, ' ಎಂಬುದನ್ನು ಅಲಕ್ಷಿಸಿ, ಅಧರ್ಮವನ್ನಾಚರಿಸಿದ ಬೇಡನಿಗೆ ಕೊಡುವ ವಾಲ್ಮೀಕಿಯ ಶಾಪ ಯುಕ್ತವಾದದ್ದು" (ನೋಡಿ, ಶ್ರೀಮದ್ವಾಲ್ಮೀಕಿ ರಾಮಾಯಣ, ಬಾಲಕಾಂಡ, 48ನೇ ಪುಟದ ಅಡಿಟಿಪ್ಪಣಿ)–ಎಂಬ ಅಭಿಪ್ರಾಯವಾಗಲೀ ವಾಲ್ಮೀಕಿಯ ಈ ಸಂದರ್ಭದಲ್ಲಿನ ಋಷಿಗೆ ತಕ್ಕದಲ್ಲವೆಂಬ ರಾಮಮೂರ್ತಿಯವರ ಅಭಿಪ್ರಾಯವಾಗಲೀ, ಎರಡೂ ಸಂದರ್ಭದ ಸಂಕೀರ್ಣತೆಯನ್ನು ಗಮನಿಸುವುದಿಲ್ಲ.

ವಾಲ್ಮೀಕಿಯ ಮನಸ್ಸು, ನಾರದರು ಹೇಳಿ ಹೋದ ರಾಮಾಯಣದಿಂದ ತುಂಬಿ ಹೋಗಿದೆ ; ಅದನ್ನೆ ಮಹಾಕಾವ್ಯವಾಗಿಸುವ ಅನುಸಂಧಾನದಲ್ಲಿದೆ ಅವನ ಮನಸ್ಸು. ಆಹ್ನಿಕಕ್ಕಾಗಿ ಸ್ಥಳ ಹುಡುಕುತ್ತಿರುವಾಗ, ಹಠಾತ್ತನೆ ಆ ಘಟನೆ ನಡೆದಿದೆ. ಆಗ ಕ್ಷಣದಲ್ಲಿ ವಾಲ್ಮೀಕಿಗೆ ಕಂಡದ್ದು, ಗಂಡು ಪಕ್ಷಿಯ ಮೃತ್ಯು, ಹೆಣ್ಣಿನ ಆಕ್ರಂದನ ; ಮತ್ತೆ ಅದಕ್ಕೆ ಕಾರಣನಾದ ಬೇಡ. ಮನುಷ್ಯನಾಗಿ ಪ್ರತಿಕ್ರಿಯಿಸಿದ ವಾಲ್ಮೀಕಿ, ಋಷಿಯಾಗಿ ಪಡೆದಿದ್ದ

(ಕೊನೆಯ ಪುಟ ನೋಡಿ)

# ಜಾತ್ಯಾಂಧ ಹಿಂದೂ ಧರ್ಮ: ಪತನವಾಗುತ್ತಿರುವ ಕಮ್ಯೂನಿಸ್ಟರು

"ಧರ್ಮ ಅಫೀಮು ಇದ್ದಂತೆ", ' ಎಂದು ಲೆನಿನ್ ವರ್ಣಿಸಿದರು. ಅದೇನೇ ಇರಲಿ. ಅಫೀಮಲ್ಲದಿದ್ದರೂ ಏನೋ ಅಮಲೆಂಬುದಂತೂ ಖಂಡಿತ. ಭಾರತದಲ್ಲಂತೂ ಇದು ಬಹಳ ಸತ್ಯವೆನಿಸುತ್ತದೆ. ಇದರ ಜೊತೆಗೆ ಜಾತಿ, ಯಾವನೇ ಮಾನವೀಯ ದೃಷ್ಟಿ ಕೋನವುಳ್ಳವನನ್ನು ಹುಚ್ಚನನ್ನಾಗಿಸುವ ವ್ಯವಸ್ಥೆ. ಆಧುನಿಕ ವಿದ್ಯಾಭ್ಯಾಸ ಪಡೆದು ವೈಜ್ಞಾನಿಕ ಬದುಕಿನತ್ತ ಒಲವಿಡಬೇಕಾದಂಥವರೂ.. ಈ ಕೊಳಕು ಹಳ್ಳದಿಂದ ಹೊರ ಬಂದಿಲ್ಲ. ಸಂಪ್ರದಾಯ ಕುರುಡು ನಂಬಿಕೆಗಳಿಂದ ದೂರವಾಗಿಲ್ಲವೆಂಬುದು ತುಂಬಾ ವಿಶಾಧನೀಯ.

ಇದಕ್ಕೊಂದು ಉದಾಹರಣೆ :

ನನ್ನ ಕೆಲಸದ ನಿಮಿತ್ತ ಒಬ್ಬರು ಡಾಕ್ಟರರ ಮನೆಗೆ ಹೋಗಿದ್ದೆ. ಮಧ್ಯಾಹ್ನದ ಸಮಯವಾದುದರಿಂದ ಊಟಮಾಡಿಕೊಂಡೇ ಹೋಗಬೇಕೆಂದು ಒತ್ತಾಯಿಸಿದರು. ನಾನೆಷ್ಟು ಬೇಡವೆಂದರೂ ಬಿಡಲಿಲ್ಲ. ಸರಿ, ಊಟಕ್ಕೆ ಸಿದ್ಧತೆಯಾಯಿತು. ಅವರಿಗಿಂತ ಪ್ರತ್ಯೇಕ ಜಾಗದಲ್ಲಿ ಎಲೆ ಹಾಕಿ ಊಟ ಬಡಿಸಿದರು. ಊಟ ಮುಗಿದು ಇನ್ನೇನು ಎದ್ದೇಳಬೇಕೆನ್ನುವಷ್ಟರಲ್ಲಿ ಕೆಲಸದ ಆಳುವಿಗೆ ಸಗಣಿ ಮತ್ತು ನೀರು ತಂದು ಕೊಡುವಂತೆ ಡಾಕ್ಟರ್ ಅಪ್ಪಣೆಯಿತ್ತರು. ನಾನು ಇಂಥ ಪದ್ಧತಿ ಇರಬಹುದೆಂದು ಕನಸಿನಲ್ಲೂ ಯೋಚಿಸಿರಲಿಲ್ಲ. "ಅದು ಯಾತಕ್ಕೆ" ಎಂದು ಕೇಳಿದೆ.

ಆಗ ಡಾಕ್ಟರ್ ಸಗಣಿ ಹಾಕಿದರೆ "ಪರಿಶುದ್ಧವಾಯಿತೆಂದು ಲೆಕ್ಕ" ವಿವರಿಸಿದರು. "ಸಗಣಿ ಹಾಕಿದರೆ ಪರಿಶುದ್ಧ ಹೇಗಾಗುತ್ತೆ ?" ಎಂದೆ.

"ಇವೆಲ್ಲ ಒಂದು ಸಂಪ್ರದಾಯ ನಮ್ಮ ಮುಂದಿನ ಜನರೇಶನ್‌ನಲ್ಲಿ ಇವೆಲ್ಲ ಹೊರಟು ಹೋಗುತ್ತವೆ, ಎಂದರು ಡಾಕ್ಟರ್.

ನಾನು: "ನಿಮ್ಮಂಥವರಿದ್ದರೆ ಮುಂದಿನ ಜನರೇಶನ್‌ನಲ್ಲಿ ಇದಕ್ಕಿಂತಲೂ ಹೆಚ್ಚಾಗುತ್ತದೆಯೇ ಹೊರತು, ಕಮ್ಮಿಯಾಗಲಾರದು" ಎಂದಾಗ ಆತನ ಮೂತಿ ಇಂಗುತಿಂದ ಮಂಗನಂತಿತ್ತು. ಹೀಗೆಯೇ ಎಷ್ಟೋ ಉದಾಹರಣೆಗಳನ್ನು ಕೊಡಬಹುದು.

ದಲಿತರ ಬಗ್ಗೆ ಹೇಳುವಾಗ ದಲಿತರೆಂದರೆ ಯಾರು ? ಎಂಬುದನ್ನು ವಿವರಿಸಬೇಕಾಗುತ್ತದೆ. ಆರ್ಥಿಕ, ಸಾಮಾಜಿಕ ಸಾಂಸ್ಕೃತಿಕವಾಗಿ ಶೋಷಣೆಗೊಳಗಾದವರು ಎಲ್ಲರೂದಲಿತರಾಗುತ್ತಾರಾದರೂ ....ಮುಖ್ಯವಾಗಿ ಅತ್ಯಂತಶೋಷಣೆಗೊಳಗಾಗಿರುವ ಜಾತಿ ಜನಾಂಗದವರು ನಿಜವಾದ ದಲಿತರಾಗುತ್ತಾರೆ ಆದರೆ ಇಲ್ಲೊಂದು ತಮಾಷೆಯ ವಿಷಯವೆಂದರೆ ದಲಿತರ ಉದ್ಧಾರದ ಸೋಗು ಹಾಕಿಕೊಂಡವರದ್ದು. ಡಾ॥ ಅಂಬೇಡ್ಕರ್ ಒಬ್ಬ ಹರಿಜನಗಾಗಿ ಹುಟ್ಟಿ ನೋವು ಅವಮಾನಗಳನ್ನು ಅನುಭವಿಸಿ ವಿದ್ಯಾವಂತನಾಗಿ ಈ ವ್ಯವಸ್ಥೆಯ ವಿರುದ್ಧ ಬಂಡೆದ್ದು ಹೋರಾಡಿ, ದಲಿತರ ಮುಂಚೂಣಿ ನಾಯಕನಾದರೆ, ಉಳಿದವರು ಆ ನೋವಿನ ಅರಿವಿಲ್ಲದೆ, ಬಾಯಿ ಬಡಕುತನದಲ್ಲೇ ಹರಿಜನರ ಒಲವನ್ನು ಗಳಿಸುತ್ತಾ ನಿಧಾನವಾಗಿ ರಾಜಕೀಯ ಮುಖವಾಡ ಧರಿಸಿ, ತಮ್ಮ ವಿಕಾರ ಮುಖವನ್ನು ಪರಿಚಯಿಸಿದವರೆ ಹೆಚ್ಚು. ಇದರ ಪರಿಣಾಮವಾಗಿ ದಲಿತರಲ್ಲಿ ಸಂಘಟನೆ ಬೆಳೆಯಲು ಅಡ್ಡಿಯಾಯಿತು. ಬಂಡವಾಳಶಾಹೀ, ಪಾಳೇಯಗಾರಿ ಮತ್ತು ಮಧ್ಯಮವರ್ಗದ ಪರಿಷ್ಕರಣ ಸುಧಾರಣಾ, ಆರ್ಥಿಕವಾದಗಳ ಮೌಲ್ಯಗಳಿಂದ ಹೊರ ಬರಲಾಗದೆ, ಹೆಚ್ಚಾಗಿ ಕೂಲಿಗಳಾಗಿಯೇ ಇರುವ ದಲಿತರು ತಮ್ಮ ತಮ್ಮೊಳಗೇ ಭಿನ್ನಾಭಿಪ್ರಾಯಗಳ ಹುಟ್ಟಿಸಿಕೊಂಡು ಸಂಘಟನೆಯ ಬದಲು ಛಿದ್ರವಾಗತೊಡಗಿದರು.

**ಸೋಮಶೇಖರ ಯಂ.**

ಭಾರತದಲ್ಲಿ ಶೋಷಿತವರ್ಗವಾದ ದಲಿತರ ಒಲವನ್ನು ಕಮ್ಯುನಿಷ್ಟರು ಗಳಿಸಿಕೊಳ್ಳುವಲ್ಲಿ ತುಂಬ ಸೋಲನುಭವಿಸಿದ್ದು ಎಲ್ಲರಿಗೂ ತಿಳಿದ ವಿಷಯ. ಸಂಪ್ರದಾಯ, ಜಾತಿ, ಪದ್ಧತಿಗಳಿಗೇ ಜೋತಾಡಿಕೊಂಡು ಆರ್ಥಿಕವಾದದ ಭ್ರಮೆಯಲ್ಲಿ ಸಿಕ್ಕಿಹಾಕಿಕೊಂಡಿದ್ದೇ ಇದಕ್ಕೆ ಕಾರಣವೆನ್ನಬಹುದು. ಒಂದು ಕಾಲದಲ್ಲಿ ಕಮ್ಯುನಿಷ್ಟರೆಂದರೆ ಪ್ರಾಮಾಣಿಕರು; ಸಾಮಾಜಿಕ ಬದಲಾವಣೆಯಲ್ಲಿ ಆಸಕ್ತಿಯಿದ್ದವರು ಎಂಬ ನಂಬಿಕೆ ಕಾಲಕ್ರಮೇಣ ಸಡಿಲವಾಗುತ್ತಾ.... ಯೂನಿಯನಿನವರು, ಅರ್ಜಿ ಬರೆಯುವವರು; ಡೊನೇಷನ್ ಮೆಂಬರ್ ಶಿಪ್ ಕೇಳುವವರು ಎಂದೆಲ್ಲಾ ಬದಲಾಗುತ್ತಾ ಹೋಗಿ, ಕೂಲಿ, ಕಾರ್ಮಿಕರ ಜೊತೆಗಿನ ನೈಜ ಸಂಬಂಧಗಳನ್ನು ಕಳಕೊಂಡರು. ಟ್ರೇಡ್ ಯೂನಿಯನಿನ ಹೆಸರಲ್ಲಿ ಕಾರ್ಮಿಕರ ನೌಕರರ ಕೂಲಿಗಳ ದಲಿತರ ಬಾಂಧವ್ಯ ಬದಲಾಗುತ್ತಾ .. ಇಂಟಕ್ ಸದಸ್ಯ ಐಟಕ್ ಸದಸ್ಯ ಬಿ. ಎಂ. ಎ. ಸ್, ಎಚ್. ಎಂ. ಎಸ್. ಗಳಾಗಿ ಕತ್ತಿ ಮಸೆಯುವತ್ತ ಮುಂದುವರಿದು ಒಂದು ಸಂಘಟನೆಯ ನೋವು ಇನ್ನೊಂದು ಸಂಘಟನೆಯ ನಲಿವಾಗುತ್ತಾ ವಿಶ್ವದ ಕಾರ್ಮಿಕರು ಒಂದಾಗುವ ಬದಲು, ಸಾವಿರವಾಗಿ ಛಿದ್ರವಾದರು.

ಧರ್ಮದ ಹೆಸರಲ್ಲಿ ವೇಶ್ಯಾವಾಟಿಕೆ; ದಾನದ ಹೆಸರಲ್ಲಿ ಭಿಕ್ಷೆ; ದೇವರ ಹೆಸರಲ್ಲಿ ಕತ್ತಿ ಹಿಡಿದು ಕಾದಾಡುವ ನಾವು ಧರ್ಮ ಅಫೀಮಿಗಿಂತ ಬೇರೆಯೆಂದು ಯೋಚಿಸಲು ಸಾಧ್ಯವೇ ?

ದಲಿತರಿಗಿಂತಲೂ ಶೋಚನೀಯ ರೀತಿಯಲ್ಲಿ ಶೋಷಣೆಗೊಳಗಾದವರು ಮಹಿಳೆಯರು, ಅದರಲ್ಲೂ ದಲಿತ ಮಹಿಳೆ ಭಾರತದ ಸ್ತ್ರೀಯರು ಶೋಷಣೆಗೊಳಗಾದವರೇನೋ ನಿಜ. ಆದರೆ ಸವರ್ಣೀಯ ಮಹಿಳೆಗೆ ಸವರ್ಣೀಯ ಎನ್ನುವ ಜಾತಿಯ ಮುಖವಾಡವಾದರೂ ಇದೆ. ಆದೇ ದಲಿತ ಮಹಿಳೆ ಪುರುಷರಿಂದಲೂ, ಇನ್ನುಳಿದ ಸಾಮಾಜಿಕ ಶೋಷಣೆಯಿಂದಲೂ ಅವಮಾನಿತಳಾಗುತ್ತಾಳೆ.

ಇನ್ನು ವಿದ್ಯಾಭ್ಯಾಸದ ಬಗ್ಗೆ ಅಂಕೆ ಸಂಖ್ಯೆಯಲ್ಲಿ ಉತ್ತರಿಸುವುದೇನೋ ಸುಲಭವಿದೆ. ಆದರೆ ಇಲ್ಲಿಯೂ ಸೋಲು ದಲಿತನದೆ ಎಂದರೆ, ನೀವು ನಂಬಲಾರಿರಿ. ಯಾಕೆಂದರೆ ಮೀಸಲಾತಿ ಇದೆ. ಸಹಾಯಧನವಿದೆ, ಹಾಸ್ಟಲ್ ಕೊಟ್ಟು ಸರ್ಕಾರ ದಲಿತರ ಮಕ್ಕಳಿಗೆ ವಿದ್ಯಾಭ್ಯಾಸ ಸೌಕರ್ಯಗಳನ್ನು ಕಲ್ಪಿಸಿದೆ, ಒಪ್ಪಿಕೊಳ್ಳೋಣ. "ಲಂಕೇಶ್ ಪತ್ರಿಕೆ" ಯಲ್ಲಿ ಲಂಕೇಶ್ ಬರೆದಂತೆ ಹಿಂದೂ ಧರ್ಮದ ಪ್ರಚಾರವನ್ನೋ........ಪರಿಚಯವನ್ನೋ ಬೋಧಿಸುತ್ತ ವಿದ್ಯಾಭ್ಯಾಸ ಆರಂಭವಾಗುತ್ತದೆ. ಕೆಲವು ಶಾಲೆಗಳಲ್ಲಿಯಂತೂ ಶಾರದೆ, ಗಣಪತಿಯ ಭಜನೆಯಿಂದಲೇ ಆರಂಭವಾಗಿ ಐನ್‌ಸ್ಟೀನ್, ನ್ಯೂಟನ್, ಡಾರ್ವಿನ್ ತನಕ ಮುಂದುವರಿದು ಮತ್ತೆ ಸ್ವಾಮಿ ದೇವನೆ ಲೋಕಪಾಲನೆ ಆಗುತ್ತದೆ.

S.S.L.C. ತನಕ ಓದಿ ಫೇಲಯಾಗಿಯೋ, ಗುಮಾಸ್ತೆಯಾಗಿಯೋ ನೌಕರಿ ಪಡೆದವರೇ ಹೆಚ್ಚಾಗಿದ್ದು, ತಪ್ಪಿದರೆ ಮನೆಯಲ್ಲಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಸಿಕ್ಕಿದರೆ, ಪೋಸ್ಟ್ ಗ್ರಾಜುಯೇಟ್ ಆಗಿ,ಕೆಲಸ ಸಿಕ್ಕಿದರೆ ಸೇರಿ, ಇಲ್ಲವಾದರೆ ಅಲೆದಾಡುವವರೇ ಹೊರೆತು, ಇವತ್ತು ಬದಲಾಗುತ್ತಿರುವ ಸಮಾಜಕ್ಕೆ ಹೊಂದಿಕೊಂಡು ತಾಂತ್ರಿಕ, ವೈದ್ಯ

ಕೀಯ ಶಿಕ್ಷಣವನ್ನು ಪಡೆಯುವಲ್ಲಿ ದಲಿತ ವಿಫಲನಾಗಿದ್ದಾನೆ. 99% ಕೂಲಿಗಳಾಗಿರುವ ದಲಿತರ ಮಕ್ಕಳಿಗೆ ತಾಂತ್ರಿಕ ಇಲ್ಲವೇ ವೈದ್ಯಕೀಯ ಶಿಕ್ಷಣದಲ್ಲಿ ಮುಂದುವರೆಯುವ ಮಾತಂತು ಬರೀ ಕನಸು. ಇವೆಲ್ಲ ಶ್ರೀಮಂತರ ಸ್ವತ್ತಾಗಿವೆ. ಇಲ್ಲಿ ನಾವು ಕಾಣುತ್ತಿರುವುದು ಶೈಕ್ಷಣಿಕ ರಂಗದಲ್ಲೂ ಬಂಡವಾಳ ಶಾಹಿ ವ್ಯವಸ್ಥೆಯ ಬೇರು ಬಲವಾಗಿದೆ ಮತ್ತು ನಯ ವಂಚನೆಯಲ್ಲಿ ತೊಡಗಿದೆ ಎಂಬುದು.

ದಲಿತರು ಇತರರಂತೆ ಮುಂದುವರಿಯುವುದನ್ನು ಸ್ವತಂತ್ರರಾಗಿ ಬದುಕುವುದನ್ನು ಸಹಿಸಲಾರದೆ, ದಲಿತರ ಮೇಲೆ ಆಕ್ರಮಣ ನಡೆದ ಎಷ್ಟೋ ಘಟನೆಗಳನ್ನು ಕಾಣಬಹುದು; ಇಂತಹದ್ದರಲ್ಲಿ ಇನ್ನೂ ಜೀವಂತವಾಗಿರುವ ಮೀನಾಕ್ಷಿಪುರಂ ಒಂದು. ಕರ್ನಾಟಕದ ಹಳ್ಳಿಗಳು ಮೀನಾಕ್ಷಿಪುರಂನಿಂದ ಹೊರತಾಗಿವೆ ಎಂದರೆ ತಪ್ಪಾದೀತು. ಜಾತಿಯ ಹೆಸರಲ್ಲಿ ಇನ್ನೂ ಕರ್ನಾಟಕದ ಹಳ್ಳಿಗಳಲ್ಲಿ ದಲಿತ ಗುಲಾಮನಾಗೇ ಬದುಕುತ್ತಿದ್ದಾನೆ.

ಹಿಂದೂ ಮುಖಂಡರೇ ಮಠಾಧಿಪತಿಗಳೇ ನಿಮಗೆ ಸಾಧ್ಯವಿದ್ದರೆ ನಾವು ಹಿಂದುಗಳೆಂದು ಬೊಬ್ಬೆಯಿಟ್ಟು ಮುಸ್ಲಿಂ ಕ್ರೈಸ್ತರ ಬೆನ್ನಿಗೆ ಲಾಠಿ ಎತ್ತ ಬೇಡಿ. ದಲಿತರೂ ಹಿಂದೂಗಳೆಂದೂ ನಿಮ್ಮ ಹಿಂದೂ ಧರ್ಮದ ಬಗ್ಗೆ ನಿಮಗೆ ಒಲವಿದ್ದರೆ ಸಭೆ ಪರಿಷತ್ತು ನಡೆಸಿ ಮರುಳು ಮಾಡಬೇಡಿ. ನೇರವಾಗಿ ನಮ್ಮ ಸಮಸ್ಯೆಗಳನ್ನು ಸ್ವೀಕರಿಸಿ ಉತ್ತರಿಸಿರಿ.

1 ಹರಿಜನನಿರಲಿ ಅಥವಾ ಯಾವನೇ ಜಾತಿ ಪಂಗಡದವನಿರಲಿ ಸಮಾನ ಪ್ರೀತಿ, ಗೌರವ ವಿಶ್ವಾಸಗಳನ್ನು ತೋರಿಸುತ್ತೀರಾ ?

2 ಸವರ್ಣೀಯ ಹುಡುಗಿಗೆ ಅಥವಾ ಹುಡುಗನಿಗೆ ಹಿಂದುಳಿದ ದಲಿತ ಹುಡುಗ ಹುಡುಗಿಯರನ್ನು ಕೊಡು—ಕೊಳ್ಳುವ ಸಂಬಂಧ ಬೆಳೆಸುತ್ತೀರಾ ?

3 ಹಿಂದುಗಳೆಂದುಕೊಂಡೇ ಪ್ರೇಮ ವಿವಾಹಗಳಿಗೆ ಜಾತೀಯ ಬಂಧನದಲ್ಲಿ ಆಗುವ ಹಿಂಸೆ, ಮಾನಹಾನಿ ಪ್ರಾಣ ಹಾನಿಗಳನ್ನು ತಡೆ ಹಿಡಿಯುತ್ತೀರಾ ?

4 ಮುಂದುವರಿದ ಸವರ್ಣೀಯರೇ, ಹಿಂದೂ ಪ್ರೇಮಿಗಳೇ ನೀವು ಭೋಗಿಸುವ ಸಂಪತ್ತಿನ ಕನಿಷ್ಟ ಪಕ್ಷ ಒಂದು ಕುಟುಂಬದ ಜೀವನಾವಶ್ಯಕ್ಕೆ ಬೇಕಾಗುವಷ್ಟನ್ನು ಬಡದಲಿತರಿಗೆ ಕೊಡುತ್ತೀರಾ ?

5 ನಿಮ್ಮ ಧಾರ್ಮಿಕ ಮಠ, ಪೀಠಗಳಲ್ಲಿ ನಿಮ್ಮಂತೆಯೇ ಗೌರವ ಪೂರ್ಣವಾದ ಒಂದುಸ್ಥಾನವನ್ನು ದಲಿತರಿಗೂ ಕೊಡುತ್ತೀರಾ ?

ಇದೆಲ್ಲ ನಿಮಗೆ ಸಾಧ್ಯವೇ ?

ಸಾಧ್ಯವಿಲ್ಲವಾದರೇ........ ಮೀನಾಕ್ಷಿಪುರದ ಹರಿಜನ ಮುಸ್ಲೀಮರ ಮೇಲಾಗಲೀ, ಬೆಳ್ತಂಗಡಿಯಹರಿಜನಕ್ರಿಶ್ಚಿಯನರ ಮೇಲಾಗಲೀ ಕೆಂಡಕಾರಬೇಡಿ.

ನಾವು ಸ್ವತಂತ್ರರು. ಹಿಂದುಗಳಾಗಬಹುದು. ಕ್ರಿಶ್ಚನರಾಗಬಹುದು. ಮುಸ್ಲೀಂ ಮತ ಸೇರಬಹುದು. ಇಲ್ಲವೇ ಯಾವುದೇ ಧರ್ಮದವರಾಗದೆ ಇರಬಹುದು. ನಾವು ಕೇಳುವುದು ಸಮಾನತೆಯನ್ನು, ಬದುಕುವ ಹಕ್ಕನ್ನು ಹೊರೆತು ಯಾವುದೇ ಬಂಧನವನ್ನಲ್ಲ.

## ...ನೊಳಕೆ ಪುಢಾರಿಗಳು

"ನನಗೆ ನೀವು ಸಂಪೂರ್ಣ ಕ್ರಾಂತಿ ಇತ್ಯಾದಿಯಾಗಿ ಹೇಳಿದರೆ ಏನೂ ಅರ್ಥವಾಗಿಲ್ಲ. ಆದ್ದರಿಂದ ಹಲವಾರು ಗಂಟೆಗಳಿಂದ ನನಗೆ ಗಾಂಧೀಜಿಯಿಂದ ಏನಾದರೂ ಸಹಾಯ ದೊರೆತೀತೆಂದು ಆಶಿಸಿ ಯೋಚಿಸುತ್ತಿದ್ದೇನೆ. ಜೆ. ಪಿ. ಚಂದ್ರಶೇಖರ್ ಇವರಷ್ಟು ಗಾಂಧೀಜಿ ಮಾತನ್ನು ನಂಬಿದ ವ್ಯಕ್ತಿಯಾಗಿರಲಿಲ್ಲ. ಯಾವುದೇ ಸಭೆಗೆ ಹೋಗುವ ಮುನ್ನ ಗಾಂಧೀಜಿ ಕೇಳುತ್ತಿದ್ದರು, "ಆ ಸಭೆಯಲ್ಲಿ ಎಷ್ಟು ಜನ ಹರಿಜನರು, ಎಷ್ಟು ಜನ ಹೆಂಗಸರು ಇರುತ್ತಾರೆ ? ಅವರು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಿದ್ದರೆ ನಾನು ಬರುವುದಿಲ್ಲ." ಇದು ಗಾಂಧೀಜಿಯ ವಾಸ್ತವದ ಅರಿವನ್ನು ತೋರುತ್ತದೆ. ನಾವು ಎಷ್ಟು ಅಬ್ಬರದಿಂದ ಮಾಡುತ್ತೇವೆ ಎನ್ನುವುದಕ್ಕಿಂತ, ಎಷ್ಟು ಅರ್ಥಪೂರ್ಣ ಪುಟ್ಟ ಕೆಲಸ ಮಾಡುತ್ತೇವೆ ಎಂಬುದು ಮುಖ್ಯ. ನಿಮ್ಮೂರಿಗೆ ಹೋಗಿ ನಿಮ್ಮ ಸಣ್ಣ ಊರಿನ ಒಂದೇ ಬಾವಿಯಲ್ಲಿ ಹರಿಜನರು, ಮುಸ್ಲಿಮರು, ಲಿಂಗಾಯತರು—ಎಲ್ಲರೂ ನೀರು ಸೇದಿಕೊಳ್ಳುವಂತೆ ಜನರ ಮನವೊಲಿಸಿ; ನಿಮ್ಮ ಸರ್ಕಾರಕ್ಕೆ ಹೇಳಿ ಹರಿಜನರಿಗೆ ನೀವು ಕಟ್ಟಿಸಬಹುದಾದ ಮನೆಗಳು ಊರಿನ ಮಧ್ಯೆ ಎಲ್ಲರ ಜೊತೆಗೆ ಕಟ್ಟುವಂತೆ ನೋಡಿಕೊಳ್ಳಿ; ಯುವಕರಾದ ನಿಮಗೆ ನಿಮ್ಮ ಮಂತ್ರಿಗಳ ಮೇಲೆ ಪ್ರಭಾವ ಇದ್ದರೆ, ಅವರ ಭೇಟಿಯ ಕಾಲದಲ್ಲಿ ಒಂದೊಂದು ಸಲವಾದರೂ ಬಡ ಜನರ ಜಗುಲಿಯಿಂದ ತಮ್ಮ ಕೆಲಸ ನಿರ್ವಹಿಸುವಂತೆ ಹೇಳಿ. ಊರಿನ "ಗಣ್ಯರು ಅಧಿಕಾರಿಗಳು, ಪೋಲೀಸರು—ಎಲ್ಲರೂ ಅಲ್ಲಿಗೆ ಬಂದು ಮಂತ್ರಿಗಳೊಂದಿಗೆ ಮಾತಾಡಲಿ"

ಇವುಗಳಲ್ಲಿ ಒಂದಾದರೂ ಆದರೆ ನೀವು ಯುವಕರು; ಇಲ್ಲದಿದ್ದರೆ ನೀವೆಲ್ಲ ಮೊಳಕೆ ಸ್ಥಿತಿಯಲ್ಲಿರುವ ಪುಢಾರಿಗಳು.

—ಪಿ. ಲಂಕೇಶ್
(ಟೀಕೆ ಟಿಪ್ಪಣಿಯಿಂದ)

# ಸವರ್ಣೀಯರಿಗೇ ಸಾಂಸ್ಕೃತಿಕ ಬಿಡುಗಡೆಯ ಅಗತ್ಯ

ನಾವೂ ದಲಿತರು ಹಸಿವು ಮತ್ತು ಅವಮಾನ ಉಣ್ಣುತ್ತಿರುವವರು ಒಂದ್ಕಡೆ ಇದ್ದೇವೆ. ಬರೇ ಹಸಿವನ್ನು ಉಣ್ಣುತ್ತಿರುವವರು ಬೇರೆಕಡೆ-ಇದ್ದಾರೆ. ನಮ್ಮನ್ನು ಮುಟ್ಟಿಸಿಕೊಳ್ಳದಂತೆ ಇದ್ದಾರೆ. ಬಡತನ ಇಬ್ಬರಿಗೂ ಸಾಮಾನ್ಯ ಇದ್ದರೂ ಅಸ್ಪೃಶ್ಯರೂ ಮತ್ತು ಇತರೆ ಬಡವರೂ ಹಸಿವು ಬಡತನದ ಮಟ್ಟಿಗಾರೂ ಒಂದಾಗಿಲ್ಲ. ನಾವು ಅವರನ್ನು ಮುಟ್ಟಲು ಕೈಚಾಚಿದರೆ ನಾವೆಲ್ಲಿ ಮುಟ್ಟಿಬಿಡುತ್ತೇವೊ ಎಂಬ ಆತಂಕದಿಂದ ಅವರು ದೂರ ಸರಿಯುತ್ತಾರೆ. ಈ ಕಗ್ಗಂಟನ್ನು ಬಿಡಿಸುವುದೂ ನಮ್ಮ ಮೇಲೇ ಇದೆ. ಜಾತಿಮತ ಕಳಚಿಕೊಂಡು ಬಡವರು ಒಂದಾಗದೆ ಬಡವರಿಗೆ ವಿಮೋಚನೆ ಇಲ್ಲ ಅದಕ್ಕಾಗಿ.

ನಮ್ಮ ದಲಿತರ ಉದ್ಧಾರಕ್ಕೆ ಚರಿತ್ರೆಯು ಕಷ್ಟಪಟ್ಟುಕೊಂಡು ಒಂದಿಷ್ಟು ಪ್ರಯತ್ನ ನಡೆಸಿದೆ, ನಮ್ಮನ್ನು ಉದ್ಧಾರ ಮಾಡಬೇಕು ಎಂದಿದೆ. ಇದರಿಂದಾಗಿ ಸ್ವಲ್ಪಮಟ್ಟಿನ ಅನುಕೂಲವೂ ಆಗಿದೆ. ಆದರೆ ಸಾಂಸ್ಕೃತಿಕವಾಗಿ ದಲಿತರಿಗೆ ಸವರ್ಣೀಯರ ಮೇಲೆ ಸೇಡು ಹೆಚ್ಚಿದೆ. ಹಾಗೇ ಸವರ್ಣೀಯರಿಗೆ ದಲಿತರ ಬಗ್ಗೆ ಅಸಾಧ್ಯ ಅಸಹನೆ ಉಂಟಾಗಿದೆ. ಇರಲಿ.

ಈ ಬಗ್ಗೆ ನಾವು ಯಾಕೆ ಹೊಸಥರ ಯೋಚಿಸಬಾರದು ಎಂದು ಯೋಚಿಸುತ್ತಿದ್ದೇನೆ. ಯಾಕೆಂದರೆ ಒಂದು ಸಂಸ್ಕೃತಿಯಲ್ಲಿ "ಮೇಲೂ" ಅಂದುಕೊಳ್ಳುವುದೂ ಅಸಹ್ಯಕರವಾದುದು, ಅನಾಗರಿಕವಾದುದು ಅದು ಪತನದ ದಾರಿ. ಮೇಲು ಅಂದುಕೊಳ್ಳುತ್ತಿರುವ ಸವರ್ಣೀಯರು ಹೀಗಾಗಿ ಅಸಹ್ಯ ಅನಾಗರಿಕ ಪತನದ ದಾರಿಯಲ್ಲಿದ್ದಾರೆ. ಅದು ಅವರಿಗೆ ಅರಿವಿಲ್ಲದಿರಬಹುದು. ಅವರಿಗೆ ಸಾಂಸ್ಕೃತಿಕ ಬಿಡುಗಡೆಯ ಅಗತ್ಯ ಹೆಚ್ಚಾಗಿದೆ.

ಈ ಹೊಣೆಯನ್ನು ನಾವೇ ದಲಿತರು ಯಾಕೆ ಹೊರಬಾರದು ? ಇದರಿಂದ ನಮಗಿರುವ ಸೇಡು ಕಮ್ಮಿಯಾಗಲಾರದೆ ? ಇದರಿಂದ ಸವರ್ಣೀಯ ರಕ್ತಗತ ಅಸಹನೆ ಕಮ್ಮಿಯಾಗಲಾರದೆ ? ಇದರಿಂದ ನಾವು ಹತ್ತಿರ ಆಗಲಾರವೆ ?

—ದೇವನೂರ ಮಹಾದೇವ
(ಚಾಮರಾಜನಗರದಲ್ಲಿ ಮಾಡಿದ ಭಾಷಣ)

**ಭಾರತದಲ್ಲಿ ಮುಸ್ಲಿಮರ ಮೇಲೆ ನಡೆಯುವ ಹಲ್ಲೆಗಳಿಗೂ ನಾಜ್ಹಿ ಬರ್ಬರತೆಗೂ ಮೂಲಭೂತ ವ್ಯತ್ಯಾಸಗಳಿಲ್ಲ. ಇರುವ ವ್ಯತ್ಯಾಸಗಳೇನಿದ್ದರೂ ಕೇವಲ ವಿವರಗಳದ್ದು.**

# ಹಿಂದೂ ಮನಸ್ಸಿನ ಭಯ ಸಂಶಯ: ಬಲಿ ಪಶು ಆಗುತ್ತಿರುವ ಮುಸ್ಲಿಮರು

ಜ. ರಾಜಶೇಖರ್

ಹರಿಜನರಂತೆಯೇ, ಮುಸ್ಲಿಮರು ಕೂಡಾ ನಮ್ಮ ದೇಶದ ಎರಡನೆ ದರ್ಜೆಯ ಪ್ರಜೆಗಳು. ಹರಿಜನರನ್ನು ಬಿಟ್ಟರೆ ಕಡುಬಡವರು. ಅನಕ್ಷರಸ್ಥರು. ಸಾಮಾಜಿಕವಾಗಿ ಹಿಂದುಳಿದವರು ಅತಿ ದೊಡ್ಡ ಸಂಖ್ಯೆಯಲ್ಲಿರುವುದೂಮುಸ್ಲಿಮರಲ್ಲಿಯೇ. ದೇಶದ ಜನಸಂಖ್ಯೆಯ ಸುಮಾರು ಶೇಕಡಾ 12ರಷ್ಟಿರುವ ಮುಸ್ಲಿಮರಿಗೆ ಶಿಕ್ಷಣ, ಉದ್ಯೋಗ ಅವಕಾಶಗಳಲ್ಲಿ ಅವರಿಗೆ ನ್ಯಾಯವಾಗಿ ದೊರೆಯಬೇಕಾದ್ದರ ಕಾಲು ಭಾಗವೂ ದೊರೆಯುತ್ತಿಲ್ಲ. ಈ ಮುಸುಕಿನೊಳಗಿನ ಈ ದಬ್ಬಾಳಿಕೆಯೂ ಸಾಲದೆಂಬಂತೆ, ನಮ್ಮ ನಾಡಿನಲ್ಲಿ ಒಂದಲ್ಲ ಒಂದು ಕಡೆ ಅತ್ಯಂತ ಕ್ಷುಲ್ಲಕ ಕಾರಣಗಳಿಗೋಸ್ಕರ, ಮುಸ್ಲಿಮರ ಮೇಲೆ ಪೂರ್ವನಿಯೋಜಿತವಾದ, ಸುಸಜ್ಜಿತವಾದ ಹಲ್ಲೆಗಳು ನಡೆಯುತ್ತಲೇ ಇರುತ್ತವೆ. ಸಾಕಷ್ಟು ದೀರ್ಘಕಾಲದ ತಯಾರಿಯಿಂದ, ಸುಸಂಘಟಿತವಾಗಿ ನಡೆಯುವ ಈ ಹಲ್ಲೆಗಳಲ್ಲಿ ಮುಸ್ಲಿಮರ ಮನೆ, ಆಸ್ತಿಪಾಸ್ತಿ, ಅಂಗಡಿ ಮುಂಗಟ್ಟುಗಳನ್ನು ಅತ್ಯಂತ ವ್ಯವಸ್ಥಿತವಾಗಿ ನಾಶಪಡಿಸಲಾಗುತ್ತದೆ. ಜೊತೆಗೆ ದೊಡ್ಡ ಸಂಖ್ಯೆಯಲ್ಲಿ ಮುಸ್ಲಿಮರನ್ನು ಅವರು ಮುಸ್ಲಿಮರು ಎಂಬ ಒಂದೇ ಕಾರಣಕ್ಕಾಗಿ ಕೊಲ್ಲಲಾಗುತ್ತದೆ.. ಎಲ್ಲ ಕೋಮು ಹಲ್ಲೆಗಳಲ್ಲಿಯೂ ಅತಿ ಹೆಚ್ಚು ಪ್ರಾಣ ಹಾನಿ, ವಿತ್ತಸೊತ್ತುಗಳ ನಷ್ಟಗಳಿಗೆ ಒಳಗಾಗುವವರು ಮುಸ್ಲಿಮರು. ಆದರೆ ಈ ಹಲ್ಲೆಗಳಲ್ಲಿ ಬಂಧಿತರಾಗುವವರಲ್ಲಿಯೂ ಮುಸ್ಲಿಮರದ್ದೇ ದೊಡ್ಡ ಸಂಖ್ಯೆಯಾಗಿರುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಬಹು ಸಂಖ್ಯಾತ ಕೋಮಿನ ಕ್ರಿಮಿನಲ್‌ಗಳಿಗೆ ಯಾವ ಶಿಕ್ಷೆಯೂ ಆಗುವುದಿಲ್ಲ; ಹೂತ್ರವಲ್ಲ, ಅವರು ಕೆಲವರ ಕಣ್ಣಿನಲ್ಲಿ ಅಖಂಡ ದೇಶಪ್ರೇಮಿಗಳೂ ಆಗಿಬಿಡುತ್ತಾರೆ. ಸಾಮಾನ್ಯವಾಗಿ ಸರಕಾರದ ಕೆಳಮಟ್ಟದ ಅಧಿಕಾರಿಗಳು, ನ್ಯಾಯಾಂಗ ಮತ್ತು ಪೋಲೀಸರು, ಹಲ್ಲೆಗೊಳಗಾದ ಮುಸ್ಲಿಮರಿಗೆ ಯಾವ ರಕ್ಷಣೆಯನ್ನೂ ಕೊಡುವುದಿಲ್ಲ. ಈ ಅಧಿಕಾರೀ ವರ್ಗದಲ್ಲಿ ಹೆಚ್ಚಿನವರು ಬಹುಸಂಖ್ಯಾತ ಕೋಮಿನವರಾಗಿದ್ದು, ಇವರು ಈ ಕೋಮಿನ ಗೂಂಡಾಗಳ ಹಿಂಸಾಚಾರಕೆ ಸಕ್ರಿಯ ಸಹಕಾರ ನೀಡುತ್ತಾರೆ; ಅಥವಾ ಕಂಡೂ ಕಾಣದಂತೆ ಸುಮ್ಮನಿದ್ದು ಬಿಡುತ್ತಾರೆ.

ನಮ್ಮ ಎಲ್ಲ ಜನಪ್ರಿಯ ಪತ್ರಿಕೆಗಳೂ, ಹಿಂದೂ ಮುಸ್ಲಿಂ ಕೋಮು ಗಲಭೆಗಳ ಬಗ್ಗೆ ಸುಳ್ಳನ್ನೇ ಬರೆಯುತ್ತವೆ; ಅಥವಾ ಏನನ್ನೂ ಬರೆಯುವುದಿಲ್ಲ. ಮುಸ್ಲಿಮರ ಸಾಮಾಜಿಕ ಹಿಂದುಳಿದಿರುವಿಕೆಯ ಬಗ್ಗೆಯಂತೂ ಅವು ಗಾಢವಾದ ಅಲಕ್ಷ್ಯವನ್ನೇ ತೋರಿಸಿವೆ. ಆದ್ದರಿಂದಲೇ ಪತ್ರಿಕೆಗಳ ಪ್ರತಿನಿತ್ಯದ ಓದಿನಿಂದ ಮಾತ್ರ ತಮ್ಮ ಆತ್ಮಸಾಕ್ಷಿಯನ್ನೂ, ಅಂತಃಕರಣವನ್ನೂ ಜೀವಂತ ಉಳಿಸಿಕೊಂಡು ಹೋಗುವ ನಮ್ಮ ವಿದ್ಯಾವಂತ ಲಿಬರಲ್‌ಗಳು, ಈ ದೇಶದಲ್ಲಿ ಮುಸ್ಲಿಮರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ಅತ್ಯಾಚಾರ, ಶೋಷಣೆಗಳ ಬಗ್ಗೆ ಕುರುಡರಾಗಿದ್ದಾರೆ. ಮುಸ್ಲಿಮರ ಮೇಲೆ ನಡೆಯುವ ಎಲ್ಲ ಹಲ್ಲೆಗಳನ್ನೂ ನಮ್ಮ ಎಲ್ಲ ಪತ್ರಿಕೆಗಳೂ "ಎರಡು ಕೋಮುಗಳ ನಡುವೆ ಘರ್ಷಣೆ" ಎಂದೇ ಬಣ್ಣಿಸುತ್ತವೆ; ಮುಸ್ಲಿಂ ಅಲ್ಪಸಂಖ್ಯಾತ ಮತದವರ ಧಾಳಿ, ಎರಡು ಸಮಬಲದ ಗುಂಪುಗಳ ನಡುವಿನ ಘರ್ಷಣೆಯೋ ಎಂಬಂತೆ ಚಿತ್ರಿಸಲ್ಪಡುತ್ತದೆ. ನಮ್ಮ ಲಿಬರಲ್‌ಗಳ ಆತ್ಮಸಾಕ್ಷಿ ನೆಮ್ಮದಿಯಿಂದ ನಿದ್ರಿಸಲು ಇಷ್ಟು ಸಾಕು.

ಅಂದರೆ ಈ ಹಲ್ಲೆಗಳ ಹಿಂದಿರುವ ಜನಾಂಗದ್ವೇಷದ, ನರಹತ್ಯೆಯ ಫ್ಯಾಸಿಸ್ಟ್ ರಾಜಕಾರಣಕ್ಕೆ ಇಷ್ಟು ಸಾಲದು. ಈ ರಾಜಕಾರಣದ ಪ್ರಚಾರ ಯಂತ್ರದ ಬೊಗಳು ಸನ್ನಿ, 'ಕೋಮು ಘರ್ಷಣೆ'ಗಳ ಹೆಸರಿನಲ್ಲಿ ಮುಸ್ಲಿಮರ ಮೇಲೆ ನಡೆಯುವ ಹಲ್ಲೆಗಳಿಗೆ ಧರ್ಮ ಮತ್ತು ಚರಿತ್ರೆಯ ಸಮರ್ಥನೆಗಳನ್ನು ಪುರಾವೆಗಳನ್ನು ಒದಗಿಸುತ್ತದೆ. ಈ ಪ್ರಚಾರ ಯಂತ್ರಕ್ಕೆ ಮಧ್ಯಯುಗದಮುಸ್ಲಿಂ ರಾಜರ ಆಳ್ವಿಕೆ, ಇದೇ ಮುಸ್ಲಿಂ ಜನಾಂಗದ ಸಾರ್ವಕಾಲಿಕ ಕಾರ್ಯಕ್ಕೆ ಪುರಾವೆಯಾಗುತ್ತದೆ. ಅವಿದ್ಯೆ ಮತ್ತು ಸಾಮಾಜಿಕ ಹಿಂದುಳಿದಿರುವಿಕೆಯಿಂದ ಮುಸ್ಲಿಮರಲ್ಲಿ ತುಂಬಿಕೊಂಡಿರುವ ಕಂದಾಚಾರ, ಸಂಪ್ರದಾಯ ಶರಣತೆ ಒಳಸಂಚಿನಂತೆ ಕಾಣಿಸುತ್ತದೆ. ಅಧಿಕಾರ, ಪದವಿಗಳಿಗೋಸ್ಕರ ಹೊಡೆದಾಟ, ರಕ್ತಪಾತ, ಎಲ್ಲ ಪಾಳೆಯಗಾರೀ ರಾಜಸತ್ತೆಯ ಲಕ್ಷಣಗಳಾಗಿದ್ದರೂ ನಮ್ಮ ಚರಿತ್ರೆಯ ಮುಸ್ಲೀಂ ರಾಜರ ದಂಡೆಯಾತ್ರೆ ಮತ್ತು ಅವರು ಭಗ್ನಗೊಳಿಸಿದ ದೇವಾಲಯಗಳ ಅವಶೇಷಗಳ ಹೊರೆಯನ್ನು ಈ ನಾಡಿನ ಎಲ್ಲ ಮುಸ್ಲಿಮರ ತಲೆಯ ಮೇಲೂ, ಎಲ್ಲ ಕಾಲಕ್ಕೂ ಹೊರಿಸಿಬಿಡಲಾಗಿದೆ. ಹಾಗೆಯೇ ಸಾಮ್ರಾಜ್ಯಶಾಹೀ ಬಂಡವಾಳಶಾಹೀ ರಾಜಕಾರಣದ ಅನಿವಾರ್ಯ ಫಲಶೃತಿಯಾಗಿರುವ ದೇಶ ವಿಭಜನೆಯ ಸಂಪೂರ್ಣ ಜವಾಬ್ದಾರಿಯನ್ನೂ ಮುಸ್ಲಿಮರ ಮೇಲೆ ಮಾತ್ರ ಹೊರಿಸಲಾಗಿದೆ. ಈ ಕಾರಣದಿಂದ ಕೋಮು ಘರ್ಷಣೆಗಳಲ್ಲಿ ಬಡ ಮುಸ್ಲಿಮರು ತಮ್ಮ ತುತ್ತು ಅನ್ನದ ಆಸರೆಯನ್ನೂ ಕಳೆದುಕೊಳ್ಳುವುದು, ಮುಗ್ಧ ಜೀವಗಳು ಬಲಿಯಾಗುವುದು; ನಮ್ಮ ವಿದ್ಯಾವಂತರಿಗೂ ಭಯಂಕರವಾಗಿ ಕಾಣಿಸಿಕೊಳ್ಳುವುದಿಲ್ಲ. ಅದು ಮುಸ್ಲಿಮರ 'ಅಪರಾಧ'ಕ್ಕೆ ಅವರಿಗಾದ ಶಿಕ್ಷೆ ಎಂದು ಯೋಚಿಸುವುದು ಇವರಿಗೆ ಅಭ್ಯಾಸವಾಗಿ ಹೋಗಿದೆ. ಈ ನಾಡಿನಲ್ಲಿ ಹೆಂಡತಿ ಮಕ್ಕಳು, ತಂದೆತಾಯಿ, ಸೋದರಸೋದರಿಯರ ಮಧ್ಯೆ ಎಂತಹದ್ದೋ ಉದ್ಯೋಗ ಮಾಡಿಕೊಂಡು ಬದುಕುವ ಸಾಮಾನ್ಯರು, ನಮ್ಮ ನಿಮ್ಮಷ್ಟೇ ಜೀವಂತವಾದ ವ್ಯಕ್ತಿಗಳು, ಅವರು ಮುಸ್ಲಿಮರಾದರೆ, ನಮ್ಮ ಮಟ್ಟಿಗೆ ಜೀವಂತ ವ್ಯಕ್ತಿಗಳಲ್ಲ. ಅವರು ಸಾಮೂಹಿಕ ಪಾಪದ, ಅಪರಾಧದ ಸಂಕೇತಗಳು; ಚರಿತ್ರೆಯ ತಪ್ಪಾಗಿ ಅರ್ಥೈಸಲ್ಪಟ್ಟ ಚರಿತ್ರೆಯ ಪ್ರತೀಕಗಳು.

ಈ ಕಾರಣದಿಂದಲೇ ನಮ್ಮ ದೇಶದಲ್ಲಿ 'ಕೋಮು ಘರ್ಷಣೆ'ಯ ಹೆಸರಿನಲ್ಲೂ ಮುಸ್ಲಿಮರ ಮೇಲೆ ನಡೆಯುವ ಹಲ್ಲೆಗಳಲ್ಲಿ ನಮ್ಮ ನಗರಗಳ, ಬಹುಸಂಖ್ಯಾತ ಕೋಮಿನ ಅರೆಶಿಕ್ಷಿತರು ಮಾತ್ರ ಸಕ್ರೀಯವಾಗಿ ಭಾಗವಹಿಸುತ್ತಾರೆ: ಮುಸ್ಲಿಮರ ಬಗೆಗಿನ ತಿರಸ್ಕಾರ,

ದ್ವೇಷ, ಸಂಶಯ ಮತ್ತು ಸುಳ್ಳು ಬೆದರಿಕೆಯ ಭಾವನೆಗಳು ಕೂಡಾ ನಮ್ಮ ನಗರಗಳ ಅರೆಶಿಕ್ಷಿತರಲ್ಲಿ ಮಾತ್ರ ಕಾಣಿಸಿಕೊಳ್ಳುವ ಪ್ರವೃತ್ತಿಯಾಗಿದೆ. ನಮ್ಮ ಹಳ್ಳಿಗಳಲ್ಲೂ ಗಣನೀಯ ಸಂಖ್ಯೆಯಲ್ಲಿ ಮುಸ್ಲಿಮರಿದ್ದರೂ, ಈ ದ್ವೇಷದ ಸನ್ನಿ ಹಳ್ಳಿಗಳನ್ನು ಇನ್ನೂ ಮುಟ್ಟಿಲ್ಲ. ಜೊತೆಗೆ ಈ ದೇಶದಲ್ಲಿ ಮುಸ್ಲಿಮರಿಗೆ 800 ವರ್ಷಗಳ ಚರಿತ್ರೆಯಿದ್ದರೂ, ಹಿಂದೂಗಳ ಮುಸ್ಲಿಂ ದ್ವೇಷ ಮತ್ತು ಕೋಮು ಹಲ್ಲೆಗಳು ಈ ಶತಮಾನದಲ್ಲಿ ಮಾತ್ರ ಕಾಣಿಸಿಕೊಂಡಿವೆ; 19ನೆಯ ಶತಮಾನದ ಅಂತ್ಯದವರೆಗೂ ಇವು ಇರಲೇ ಇಲ್ಲ ಎಂದು ಸಾಕ್ಷಾಧಾರಗಳ ಸಮೇತ ಖ್ಯಾತ ಇತಿಹಾಸಜ್ಞೆ ರೋಮಿಲಾ ಥಾಪಾರ್ ಎತ್ತಿ ತೋರಿಸಿದ್ದಾರೆ. ಎಂದೋ ಯಾರಿಂದಲೋ ಘಟಿಸಿದ ಪಾಪ ಅಪರಾಧಗಳಿಗೆ, ಇಂದಿನ ಮುಸ್ಲಿಮರೆಲ್ಲರನ್ನು ಹೊಣೆ ಸಂಕೇತಗಳನ್ನಾಗಿಸುವ ಈ ಬರ್ಬರ ಪ್ರವೃತ್ತಿಗೆ ಕುರುಡು ಜನಾಂಗ ದ್ವೇಷವೊಂದೇ ಕಾರಣವಾಗಿದ್ದು, ಬೇರೆ ಯಾವುದೇ ಚಾರಿತ್ರಿಕ,ಸಾಂಸ್ಕೃತಿಕ ನೈತಿಕ ನೆಲೆಯೂ ಇದಕ್ಕೆ ಇರುವುದು ಸಾಧ್ಯವೇ ಇಲ್ಲ.

ಯಾವುದೇ ನಾಡಿನಲ್ಲಿಯೂ ಎರಡನೆಯ ದರ್ಜೆಯ ಪ್ರಜೆಗಳು ಮಾತ್ರ ಹೀಗೆ ಸಂಕೇತಗಳಾಗುತ್ತಾರೆ; (ಹರಿಜನರು ಅಶುಚಿ ಮೈಲಿಗೆಗಳಿಗೆ ಸಂಕೇತವಾದ ಹಾಗೆ) ಇಡೀ ಸಮೂಹಕ್ಕೆ ಸಮೂಹವೇ ಅಪರಾಧಿಗಳ ಹಾಗೆ ಕಾಣಿಸುತ್ತಾರೆ. ಯೂರೋಪಿನಲ್ಲೂ ಕ್ರಿಶ್ಚಿಯನ್ನರಿಗೆ, ಯಹೂದಿಗಳು ಜೀವಂತ ವ್ಯಕ್ತಿಗಳ ಹಾಗೆ ಕಂಡಿರಲಿಲ್ಲ. ಅವರು ಪಾಪದ, ಅಪರಾಧದ ಸಂಕೇತಗಳಾಗಿದ್ದರು. ಕ್ರಿಸ್ತನನ್ನು ಶಿಲುಬೆಗೇರಿಸಿದ ಪಾಪದ ನೈತಿಕ ಜವಾಬ್ದಾರಿಯನ್ನು ಇದೇ ಯಹೂದೀ ಜನಾಂಗದ ಮೇಲೆ ನಿರಂತರವಾಗಿ ಹೊರಿಸಿಬಿಟ್ಟ ಕ್ರಿಶ್ಚಿಯನ್ನರ ಈ ಪ್ರವೃತ್ತಿ, ನಲವತ್ತು ಮಿಲಿಯ ಯಹೂದಿಗಳನ್ನು ಚಿತ್ರಹಿಂಸೆಯಿಂದ ಕೊಂದ, ಜರ್ಮನಿಯ ನಾಝೀ ಆಳ್ವಿಕೆಯಲ್ಲಿ ತನ್ನ ತಾರ್ಕಿಕ ಪರಾಕಾಷ್ಠೆಯನ್ನು ಕಂಡುಕೊಂಡಿತು. ಭಾರತದಲ್ಲಿ ಮುಸ್ಲಿಮರ ಮೇಲೆ ನಡೆಯುವ ಹಲ್ಲೆಗಳಿಗೂ ನಾಝೀ ಬರ್ಬರತೆಗೂ ಮೂಲಭೂತ ವ್ಯತ್ಯಾಸಗಳಿಲ್ಲ. ಇರುವ ವ್ಯತ್ಯಾಸಗಳೇನಿದ್ದರೂ ಕೇವಲ ವಿವರಗಳದ್ದು. ಮುಸ್ಲಿಮರನ್ನು ಸದಾ ಸಂಶಯ ಮತ್ತು ದ್ವೇಷದಿಂದ ಕಾಣುವ ಧೋರಣೆ ಕೂಡಾ ಜನಾಂಗ ದ್ವೇಷದ ನಾಝಿ ಸಿದ್ಧಾಂತದ ನೇರ ನಕಲು.

ಮುಸ್ಲಿಮರು ನಮ್ಮ ಎರಡನೆಯ ದರ್ಜೆಯ ಪ್ರಜೆಗಳಾಗಿರುವುದರಿಂದಲೇ ಅವರಿಗೆ "ಭಾರತದ ಪ್ರಜೆಗಳಾಗಲು", "ದೇಶಕ್ಕೆ ನಿಷ್ಠೆ ತೋರಿಸಲು", "ಹಿಂದೂತ್ವವನ್ನು ಗೌರವಿಸಲು", "ನಾಡಿನ ಸಂಸ್ಕೃತಿಯ ಮುಖ್ಯಧಾರೆಯಲ್ಲಿ ಒಂದಾಗಲು", "ಬಹುಸಂಖ್ಯಾತರ ಭಾಷೆಯನ್ನು ಬಳಸಲು" ಸದಾ ಕರೆ ಕೊಡಲಾಗುತ್ತದೆ. ಇದೆಲ್ಲವೂ ಅವರ ಒಳಿತಿಗಾಗಿಯೇ ಎನ್ನುವ ಔದಾರ್ಯ ತೋರಿಸಲು ನಮ್ಮ ಅಚ್ಚ ಸ್ವದೇಶಿ ಬ್ರಾಂಚಿನ ಫ್ಯಾಸಿಸ್ಟರು ಮರೆಯುವುದಿಲ್ಲ. ಎರಡನೆಯ ದರ್ಜೆಯ ಪ್ರಜೆಗಳಿಗೆ ತಮ್ಮ ಒಳಿತಿನ ದಾರಿ ಗೊತ್ತಿರುವುದಿಲ್ಲ. ಅವರಿಗೆ ಆಯ್ಕೆಯ ಹಕ್ಕೂ ಇರುವುದಿಲ್ಲ. ಅವರು ಯಾವಾಗಲೂ ತಮ್ಮ ಒಳಿತಿಗಾಗಿಯೇ, ಸಂಸ್ಕೃತಿಯ ಮುಖ್ಯ ಧಾರೆಯಲ್ಲಿ ಒಂದಾಗಬೇಕು; ಬಹುಸಂಖ್ಯಾತರ ಭಾಷೆಯನ್ನೇ ಮಾತನಾಡಬೇಕು (10 ಕೋಟಿಯಷ್ಟು ಜನರ ಭಾಷೆಯಾದ ಉರ್ದುವಿಗೆ ದೇಶದ ಯಾವ ರಾಜ್ಯದಲ್ಲಿಯೂ ಅಧಿಕೃತ ಸ್ಥಾನಮಾನಗಳಿಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು) ಮನೆ,ಮಡದಿ,ಮಕ್ಕಳು ಅನ್ನ, ಉದ್ಯೋಗಗಳ ತಾಪತ್ರಯ ಹಚ್ಚಿಕೊಂಡಿರುವ ವ್ಯಕ್ತಿಯೊಡನೆ, ಅವನ ಸುಖ ಕಷ್ಟದ ಬಗ್ಗೆ ಮಾತ್ರ ಮಾತನಾಡಬಹುದು, "ಸಂಸ್ಕೃತಿಯ,ಧರ್ಮದ ಭಾಷೆಯ ಮುಖ್ಯ ಧಾರೆಯಲ್ಲಿ ಒಂದಾಗು, ಅದು ನಿನ್ನ ಒಳಿತಿಗೆ" ಎಂದು ಅವನಿಗೆ ಉನ್ಮಾದದ ಕರೆಕೊಡಲಾಗುವುದಿಲ್ಲ. ಈ ವ್ಯಕ್ತಿ ಎರಡನೆಯ ದರ್ಜೆಯ ಪ್ರಜೆಯಾದಾಗ ಮತ್ತು ಅವನನ್ನೇ ನಾವು ಪಾಪ ಅಪರಾಧಗಳ ಸಂಕೇತವನ್ನಾಗಿ ಮಾಡಿಕೊಂಡಾಗ ಮಾತ್ರ ಹೀಗೆಲ್ಲ ಕರೆಕೊಡುವುದು ಸಾಧ್ಯ. ಯಾವುದೇ ವ್ಯಕ್ತಿಯನ್ನು ಎಂದೊ ಘಟಿಸಿದ ಪಾಪದ ಸಂಕೇತವನ್ನಾಗಿ ಪರಿವರ್ತಿಸುವುದು ಮತ್ತು ಅವನು ಭಾಗಿಯಾಗದ ಅಪರಾಧಗಳಿಗೆ ಅವನನ್ನು ಜವಾಬ್ದಾರನನ್ನಾಗಿಸುವುದು ಎಂದರೆ ಅವನ ವ್ಯಕ್ತಿತ್ವವನ್ನೇ ಕೊಲ್ಲುವುದು. ಕೋಮು ಗಲಭೆಗಳಲ್ಲಿ ಆಗುವ ಎಲ್ಲ ಜೀವ ಹಾನಿಯೂ, ತಾರ್ಕಿಕವಾಗಿ ಈ ಬೌದ್ಧಿಕ ಕೊಲೆಯ ಮುಂದಿನ ಮಜಲೇ ಆಗಿದೆ. ನಮ್ಮ ಲಿಬರಲ್‌ಗಳು ಇದನ್ನು ಗಮನಿಸಬೇಕು.

ಮುಸ್ಲಿಮರ ಬಗ್ಗೆ ನಮ್ಮ ಬಹುಸಂಖ್ಯಾತ ಕೋಮಿನವರಿಗೆ ಇರುವ ಸಂಶಯ, ದ್ವೇಷ ಮತ್ತು ಭಯದ ಭಾವನೆಗಳು ವಿಚಿತ್ರ ರೂಪಗಳನ್ನು ಪಡೆದುಕೊಳ್ಳುತ್ತದೆ. ಉದಾಹರಣೆಗೆ ಪಾಕಿಸ್ತಾನದಲ್ಲಿಯೋ, ಬಾಂಗ್ಲಾದೇಶದಲ್ಲಿಯೋ ನಡೆಯುವ ಘೋರಗಳಿಗೆ ಇಲ್ಲಿನ ಮುಸ್ಲಿಮರು ಹೇಗೋ ಪ್ರಶ್ನಾರ್ಹರಾಗುತ್ತಾರೆ; ಮತ್ತು ಜವಾಬ್ದಾರರಾಗುತ್ತಾರೆ. ಈ ದೇಶಗಳಲ್ಲಿ ಮುಸ್ಲಿಮರ ಹಕ್ಕುಗಳನ್ನು, ಆ ದೇಶಗಳಲ್ಲಿ ನಾಗರಿಕ ಹಕ್ಕುಗಳಿಗಿರುವ ದುರವಸ್ಥೆಯ ಜೊತೆ ತಾಳೆ ಹಾಕಲಾಗುತ್ತದೆ. ಪಾಕಿಸ್ಥಾನ, ಬಾಂಗ್ಲಾದೇಶಗಳು ಮತೀಯ ಸರ್ವಾಧಿಕಾರಿ ಸರಕಾರಗಳ ಆಡಳಿತ ಇರುವ ದೇಶಗಳು; ನಮ್ಮದು ಅಲ್ಲ ಎನ್ನುವುದು ಸುಲಭವಾಗಿ ಮರೆತು ಹೋಗುತ್ತದೆ. ಈ ದೇಶದ ಮುಸ್ಲಿಮರನ್ನು "ಹೀಗೆಯೇ ಬಿಟ್ಟರೆ" (ಅಂದರೆ ಅವರನ್ನು ದಮನಿಸದೆ ಹೀಗೆಯೇ ಬಿಟ್ಟರೆ), ಇನ್ನೆಂದಾದರೂ ಒಂದು ದಿನ ಅವರು ದ್ರೋಹಿಗಳಾಗುತ್ತಾರೆ, ಎಂಬ ಕಾರಣಕ್ಕಾಗಿಯೂ ಮುಸ್ಲಿಂ ದ್ವೇಷವನ್ನು ಕೆರಳಿಸುವ ಸಂಘಟನೆಗಳು ನಮ್ಮಲ್ಲಿ ಇಂದು ಅತ್ಯಂತ "ಗೌರವಾನ್ವಿತ" ಸಂಸ್ಥೆಗಳಾಗಿ ಬೆಳೆಯುತ್ತಿವೆ. ಚರಿತ್ರೆಯಲ್ಲಿ ಹಿಂದೆ ಘಟಿಸಿದ ಅಪರಾಧಗಳಿಗೂ, ಭವಿಷ್ಯದಲ್ಲಿ ಆಗಬಹುದು ಎಂದು ನಾವು ಭಯದಲ್ಲಿ ಊಹಿಸುವ ಕಲ್ಪಿಸುವ ಅಪರಾಧಗಳಿಗೂ ಮುಸ್ಲಿಮರು ಹೊಣೆಗಾರರಾಗಬೇಕಾಗಿದೆ. ನೆನಪು, ಭಯ, ಸಂಶಯ, ಊಹೆ—ಎಲ್ಲ ಭಾವನೆಗಳೂ ಅದು ಮುಸ್ಲಿಮರ ಬಗೆಗಾದರೆ ದ್ವೇಷದ ಬಣ್ಣವನ್ನೇ ಪಡೆದುಕೊಳ್ಳುತ್ತದೆ; ಮತ್ತು ಅವರ ಬಗ್ಗೆ ನಮಗೆ ಗೊತ್ತಾಗದ ಹಾಗೆ ನಾವು ಕೊಡುವ ತೀರ್ಪುಗಳಾಗುತ್ತದೆ. ಎಂತಹ ಅಪರಾಧಕ್ಕೂ ಕಾಲ, ದೇಶದ ಸಂದರ್ಭಗಳಿರುತ್ತದೆ. ಆದರೆ ಈ ದೇಶದಲ್ಲಿ ಮುಸ್ಲಿಮರಾಗಿ ಹುಟ್ಟುವ ಅಪರಾಧ ಕಾಲಾತೀತವಾಗಿದೆ ಮತ್ತು ದೇಶಾತೀತವಾಗಿದೆ.

ನಂಬಬಹುದಾದ ಯಾವುದೇ ಅಂಕೆ ಸಂಖ್ಯೆಗಳ ಆಧಾರವಿಲ್ಲದೆ ಹೋದರೂ, ಮುಸ್ಲಿಮರೆಲ್ಲ ನಾಲ್ಕಾರು ಮದುವೆ ಮಾಡಿಕೊಂಡು, ಸಂತಾನ ನಿಯಂತ್ರಣಕ್ಕೆ ಒಳಪಡದೆ ಮಕ್ಕಳನ್ನು ಪಡೆದು ತಮ್ಮ ಸಂಖ್ಯೆಯನ್ನು ವಿಪರೀತ ಹೆಚ್ಚಿಸಿಕೊಳ್ಳುತ್ತಿದ್ದಾರೆ ಎಂಬ ಪ್ರಚಾರವೂ ನಡೆಯುತ್ತಿದೆ. ಆದರೆ ಚರಿತ್ರೆಯಲ್ಲಿ ಯಾವುದೇ ಜನಾಂಗ, ಯಾವುದೇ ಕಾಲದಲ್ಲಿ, ಹೀಗೆ ಪ್ರಜ್ಞಾಪೂರ್ವಕವಾಗಿ ತಮ್ಮ ಮತಸ್ಥರ ಸಂಖ್ಯೆಯನ್ನು ಹೆಚ್ಚಿಸಿಕೊಂಡಿದ್ದಕ್ಕೆ ಉದಾಹರಣೆಗಳಿಲ್ಲ; ಭಾರತದ ಜನಗಣತಿಯ ವರದಿಗಳೂ ಈ ಅಪಪ್ರಚಾರವನ್ನು ಸಮರ್ಥಿಸುವುದಿಲ್ಲ. ಯಾವುದೋ ದೂರದ ಭವಿಷ್ಯದಲ್ಲಿ, ತನ್ನ ಕೋಮಿನವರು ಜಾಸ್ತಿ ಸಂಖ್ಯೆಯವರಾಗಲಿ ಎಂಬ ಆಶೆಯಿಂದ, ಪ್ರತಿಯೊಬ್ಬ ಮುಸ್ಲಿಂ ಗಂಡಸೂ ಒಬ್ಬೊಬ್ಬ ಬೀಜದ ಹೋರಿಯಾಗಿ ಮಕ್ಕಳನ್ನು ಹುಟ್ಟಿಸುತ್ತಿದ್ದಾನೆ ಎಂಬ ವಿಚಾರವೇ ಹಾಸ್ಯಾಸ್ಪದವಾಗಿದೆ. ಹಾಗೆಯೇ ಮುಸ್ಲಿಮರ ಹೆಂಗಸರನ್ನು ಬುರ್ಖಾದಲ್ಲಿಡುವ, ಅವರಿಗೆ ಶಿಕ್ಷಣ ಮತ್ತು

ಇತರ ಹಕ್ಕುಗಳನ್ನು ನಿರಾಕರಿಸುವ ಕಂದಾಚಾರಗಳು ಸಂತಾನ ನಿಯಂತ್ರಣದ ಬಗ್ಗೆ ಅವರಿಗಿರುವ ನಿರುತ್ಸಾಹ–ಇದೆಲ್ಲ ಮುಸ್ಲಿಮರು ತಮ್ಮ ಜನಾಂಗೀಯ ಪ್ರತ್ಯೇಕತೆಯನ್ನು ಬಳಸಿಕೊಳ್ಳಲು, ಸಾಮೂಹಿಕವಾಗಿ ಮಾಡಿರುವ ಉದ್ದೇಶಪೂರ್ವಕ ಸಂಚು ಎಂದು ವಾದಿಸಲಾಗುತ್ತದೆ. ಆದರೆ ಇವು ಸಾಂಸ್ಕೃತಿಕ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ನೆಲೆಗಳಲ್ಲೆಲ್ಲ ಹಿಂದುಳಿದಿರುವ ಯಾವುದೇ ಜನಾಂಗದ ಲಕ್ಷಣಗಳೂ ಆಗಬಲ್ಲವು. ಹಿಂದುಗಳಲ್ಲಿಯೂ ಅವಿದ್ಯಾವಂತ ಹಿಂದುಗಳೇ ಅತ್ಯಂತ ಕಂದಾಚಾರಿಗಳಾಗಿದ್ದಾರೆ. ಇವರ ಕುಟುಂಬಗಳಲ್ಲಿಯ ಹೆಂಗಸರು ಅಡಿಗೆ ಮನೆಯ ಬಂಧಿಗಳೇ ಆಗಿದ್ದಾರೆ. ಉಡುಪು ತೊಡಪುಗಳ ವಿಷಯದಲ್ಲಿ, ಹಿಂದೂಗಳಿಗೂ ಕೂಡಾ ಹೆಣ್ಣಿನ ಇಡೀ ದೇಹವೇ ಒಂದು ಕಾಮದ, ಆದ್ದರಿಂದ ನಾಚಿಕೆಯ, ಮುಚ್ಚಿಟ್ಟುಕೊಳ್ಳಬೇಕಾದ ವಸ್ತು. ಹಿಂದುಗಳ ಸೀರೆ ಕುಪ್ಪಸಗಳಿಗಿಂತಲು ಮುಸ್ಲಿಮರ ಬುರ್ಖಾ ದೇಹವನ್ನು ಕೇವಲ 7–8 ಇಂಚು ಜಾಸ್ತಿ ಮುಚ್ಚುತ್ತದೆ ಎಂಬುದನ್ನು ನಾವು ಅಗತ್ಯ ಗಮನಿಸಬೇಕು. ಹಿಂದುಗಳಲ್ಲಿಯೂ ಗಂಡಸರು ಮಾತ್ರ ಕುಟುಂಬದ ಯಜಮಾನ ಎಂದು ಪರಿಗಣಿತವಾಗಿರುವುದು, ಗಂಡಸು ಮನೆಯಲ್ಲಿರುವಾಗ ಹೆಂಗಸರು ಮನೆಯ ಹೊರಗಿನ ಭಾಗಗಳಿಗೆ ಕಾಲಿಡದೇ ಇರುವುದು, ಹೆಂಗಸರು ಒಬ್ಬೊಬ್ಬರೇ ಆಗಿ ಸಾರ್ವಜನಿಕ ಸ್ಥಳಗಳಿಗೆ ಹೋಗದೇ ಇರುವುದು, ಗಂಡಸರ ಜೊತೆ ಮಾತನಾಡುವಾಗ ಸೆರಗನ್ನು ಮುಖಕ್ಕೆ ಅಡ್ಡಮಾಡಿಕೊಳ್ಳುವುದು, ಪರಪುರುಷರನ್ನು ನೋಡದೇ ಇರುವುದು, ಮನೆಯಲ್ಲಿ ಎಲ್ಲ ಗಂಡಸರ ಊಟವಾದ ನಂತರ ಉಳಿದದ್ದನ್ನು ಉಣ್ಣುವುದು, ಶಿಕ್ಷಣ, ಔಷಧ, ಮನೋರಂಜನೆ, ಆಹಾರ ಮುಂತಾದ ಎಲ್ಲದರಲ್ಲಿಯೂ ಗಂಡಸರು ಮತ್ತು ಗಂಡುಮಕ್ಕಳು ಸಿಂಹಪಾಲು ಪಡೆಯುವುದು ಮುಂತಾದ ಆಚರಣೆಗಳನ್ನು ಈಗಲೂ ನಾವು ಕಾಣಬಹುದು.

(ಹಿಂದೂ ಸಂಸ್ಕೃತಿಯಲ್ಲಿ ಹೆಂಗಸರನ್ನು ಹೇಗೆ ಕಾಣಲಾಗುತ್ತದೆ ಎಂಬ ಮಾರ್ಮಿಕ ವಿವೇಚನೆಗೆ ನೋಡಿ—"ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀ" —ಪೋಲಂಕಿ ರಾಮ ಮೂರ್ತಿ—ಸಂಕ್ರಮಣ, ವಿಚಾರವಾದ ವಿಶೇಷಾಂಕ—1982)

ಸಂತಾನ ನಿಯಂತ್ರಣದ ಬಗ್ಗೆ, ಹಿಂದುಳಿದ ಅವಿದ್ಯಾವಂತ ಬಡ ಹಿಂದೂಗಳೂ ಕೂಡಾ, ಅದೇ ವರ್ಗದ ಮುಸ್ಲಿಮರಷ್ಟೆ ಮುಜುಗರ ಪಟ್ಟುಕೊಳ್ಳುತ್ತಾರೆ. ನಮ್ಮ ದೇಶದಲ್ಲಿ ಇನ್ನೂ ಸಂತಾನ ನಿಯಂತ್ರಣಕ್ಕೆ ಒಳಪಡದ ಕುಟುಂಬಗಳಲ್ಲಿ ಇಂತಹ ಹಿಂದುಳಿದ ಕುಟುಂಬಗಳದ್ದೇ ದೊಡ್ಡ ಸಂಖ್ಯೆ ಎಂಬುದನ್ನು ನಾವು ಅಗತ್ಯ ಗಮನಿಸಬೇಕು.

ನಮ್ಮ ಪೂರ್ವಗ್ರಹ ಪೀಡಿತವಾದ ನೋಟಕ್ಕೆ ಮುಸ್ಲಿಮರಲ್ಲಿ ಕಾಣುವ ಅನೇಕ ಆಚರಣೆಗಳು, ಹಿಂದೂಗಳಲ್ಲೂ ಇರತಕ್ಕಂತಹವು (ವಿವರಗಳಲ್ಲಿ ತುಸು ವ್ಯತ್ಯಾಸ ಕಂಡರೂ) ಎಂಬ ಸತ್ಯ ಗೋಚರವಾಗುವುದಿಲ್ಲ. ಆಶ್ಚರ್ಯದ ವಿಷಯವೆಂದರೆ ತಮ್ಮ ಬದುಕಿನ ಶೈಲಿಯಲ್ಲಿ ಮತ್ತು ತಮ್ಮ ದೈನಂದಿನ ವೃತ್ತಿಗಳಲ್ಲಿ ಹಿಂದೂ ಸಂಸ್ಕಾರಗಳನ್ನು ಬಿಟ್ಟುಕೊಟ್ಟಿರುವ ನಮ್ಮ ಮಧ್ಯಮ ವರ್ಗದ ವಿದ್ಯಾವಂತ ಹಿಂದೂಗಳು ನಮ್ಮ ಗತಕಾಲದ ಚರಿತ್ರೆಯ ಬಗ್ಗೆ ಯೋಚಿಸುವಾಗ ಮಾತ್ರ ಪಕ್ಕಾ ಹಿಂದೂಗಳಾಗಿಬಿಡುತ್ತಾರೆ. ಜೊತೆ ಜೊತೆಗೆ ತಮ್ಮ ಕೋಮಿನಲ್ಲಿಯೇ ಬಹುಸಂಖ್ಯಾತರು ಅಳವಡಿಸಿಕೊಳ್ಳದೇ ಇರುವ ಸ್ತ್ರೀ ಸ್ವಾತಂತ್ರ್ಯ, ಶಿಕ್ಷಣ ಇತ್ಯಾದಿಗಳಲ್ಲಿ ಸಮಾನತೆ ವೈಜ್ಞಾನಿಕ ಮನೋಭಾವ, ಧರ್ಮ ನಿರಪೇಕ್ಷತೆ, ಇತ್ಯಾದಿ ಮೌಲ್ಯಗಳನ್ನು ಮುಸ್ಲಿಮರು ಏಕಾಏಕೀ ರೂಢಿಸಿಕೊಳ್ಳಬೇಕು ಎಂದು ಬಯಸುವ ಸುಧಾರಣಾವಾದಿಗಳೂ ಆಗುತ್ತಾರೆ. ಮುಸ್ಲಿಮರು ಹೀಗೆ ಬಾಳದೆ ಇದ್ದರೆ ಅದು ಅವರ ಹಿಂದುಳಿದಿರುವಿಕೆಯಿಂದಾಗಿ ಅಲ್ಲ; ಬದಲು ಅದು ಉದ್ದೇಶಪೂರ್ವಕವಾದ, ಒಳಸಂಚಿನಲ್ಲಿ ಸಾಮೂಹಿಕವಾಗಿ ನಿಶ್ಚಯಿಸಿಕೊಂಡ ವಿದ್ರೋಹ ಎಂದೂ ಈ ಜನ ತೀರ್ಪುಕೊಡುತ್ತಾರೆ. ಸಮೂಹ ಸನ್ನಿಗೆ ಬಲಿಯಾಗಿ ವಸ್ತುನಿಷ್ಠತೆ, ವಿವೇಕ, ತಾರತಮ್ಯ ಜ್ಞಾನಗಳಿಗೆ ಎರವಾಗಿ ಕೊನೆಗೆ ಮಾನವೀಯ ಪ್ರೀತಿ, ಅನುಕಂಪ, ಸೋದರ ಭಾವಗಳನ್ನೇ ಕಳೆದುಕೊಳ್ಳುವ ಸಾಮೂಹಿಕ ದುರಂತ ಇದು. ನಾನು ಉತ್ಪ್ರೇಕ್ಷೆ ಮಾಡುತ್ತಿಲ್ಲ. ನಾಝೀ ಜರ್ಮನಿಯಲ್ಲಿ ನಡೆದ ಜನಾಂಗ ಹತ್ಯೆಯ ಅಂದಾಜು ಇರುವವರಿಗೆ, ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಪೂರ್ವ ಪಾಕಿಸ್ತಾನ, ಪಂಜಾಬುಗಳಲ್ಲಿ ನಡೆದ ಮತೀಯ ಹಿಂಸೆಯ ನೆನಪು ಇನ್ನೂ ಮಾಸದವರಿಗೆ ಇದು ತಿಳಿಯುತ್ತದೆ.

(ದೇವರುಗಳ ರಾಜ್ಯದಲ್ಲಿ ಪುಸ್ತಕಕ್ಕೆ ಬರೆದ ಮುನ್ನುಡಿ)

## ಗಿಡದಡಿಯ ಲೋಕ

ಪಾಪಿ ಒಡೆಯನ ಮುದಿ ತೊಡೆಗಳಿಗೆ ತುತ್ತಾಗಿ
ಕಾಫಿ ಗಿಡದಡಿಯಲ್ಲಿ ಮುದುಡಿದ ಮುಗ್ಧ ಬಾಲೆಯರೆಷ್ಟೋ–
ಬೆಡಗಿನಾಗರವಾದ ಈ ಕೊಡಗಿನ ಸಸ್ಯಶ್ಯಾಮಲೆಯ ಬೇರಿಗೆ
ಬಡವರು ಬಸಿದ ಬೆವರೆಷ್ಟೋ, ಕುಡಿಸಿದ ಕಣ್ಣೀರೆಷ್ಟೋ–

ಕೇಳುವ ಕಿವಿ ಇದ್ದವರಿಗೆ ಗಿಳಿಕೋಗಿಲೆಗಳ ಪರಿಚಿತ
ಕೂಜನಕ್ಕಿಂತ ಮಿಗಿಲಾಗಿ ಮಲೆನಾಡ ನಿತ್ಯಹರಿದ್ವರ್ಣ
ದೊಡಲಲ್ಲಿ ಮಡುಗಟ್ಟಿದ ಅಮಾಯಕರ ಆಕ್ರಂದನ
ಎದೆ ನಡುಗಿಸುತ್ತದೆ.

ತಮ್ಮ ನರನರವನ್ನೆಲ್ಲ ಹಿಂಜಿ ಒಡೆಯನರಮನೆ ಅರಳಿಸಿದ
ನರಪ್ರಾಣಿಗಳು ಜೋಪಡಿಯ ಕತ್ತಲಲ್ಲಿ ಕರಗುತ್ತವೆ.
ಒಂದೊಂದು ಗಿಡದ ಬುಡವನ್ನೂ ಅಗೆದು ತೆಗೆದರೆ
ಅರೆಬಿರಿದ ಕನಸುಗಳ ಅಸ್ಥಿಪಂಜರ ಸಿಕ್ಕುತ್ತವೆ.

ಕಣ್ಣು ಕುಕ್ಕುವ ಹಣ್ಣು ಹೂ ಕಾಯಿ ಗೊಂಚಲಿನ ಮಧ್ಯೆ
ಸದ್ದು ಮಾಡದೆ ತೆಕ್ಕೆ ಮಡಿಸಿದೆ ನೋವು
ತುಳಿವ ಕಾಲಿಗೆ ತಮ್ಮ ಚರ್ಮದ ನಡೆಮಡಿಯ ಹಾಸಿ
ಹುಟ್ಟಿದ್ದಕ್ಕೆ ದಾಖಲಿಲ್ಲದೆ ಅವಿಯಾಗುವ ಬದಲು
ಇನ್ನಾದರೂ ತೆಕ್ಕೆ ಮಡಿಕೆಯ ಸಡಿಲಿಸಿ ಹೆಡೆಯೆತ್ತಿ
ಸಿಡಿಲಂತೆ ಎರಗಬೇಕು.

—ಸಿ. ನಾಗಣ್ಣ

ಸ್ಫೂರ್ತಿ : ಪಂಚಮ ಸೆಪ್ಟೆಂಬರ್ 5, 1984ರ ಸಂಚಿಕೆಯಲ್ಲಿ ಶ್ರಿ ಪಿ. ಜಿ. ವಿಜು ಪೂಣಚ್ಚರವರು ಬರೆದ ವಿಶೇಷ ವರದಿ "ದಲಿತರ ಬೆವರು ಮತ್ತು ರಕ್ತದಾಹದ ಸುಂದರ ಕೊಡಗು"

# ಅಂಬೇಡ್ಕರ್ ಕೃತಿಯ ಸಮಾಜವಾದಿ ಸಮಂಜಸತೆ

ನೀವೇಕೆ ಡಾ॥ ಬಾಬಾಸಾಹೇಬ ಅಂಬೇಡ್ಕರ್‌ರನ್ನು ಪ್ರೀತಿಸುತ್ತೀರಿ ಎಂದು ನನ್ನನ್ನು ಯಾರಾದರೂ ಕೇಳಿದರೆ ನನ್ನ ನಿಸ್ಸಂಶಯವಾದ ಉತ್ತರವಿಷ್ಟೆ. ಅವರು ನಮ್ಮ ರಾಷ್ಟ್ರೀಯ ವಿಚಾರಗಳಿಗೆ ತತ್ವಬದ್ಧ ಪರಿಹಾರಗಳನ್ನು ಸೂಚಿಸುತ್ತಾರೆ. ಇದು ಹಿಂದಿನ, ಇಂದಿನ ಅನೇಕರೊಂದಿಗೆ ಅವರನ್ನು ಹೋಲಿಸುವುದಕ್ಕಲ್ಲ, ಆದರೆ ಸಮಸ್ಯೆಗಳೊಂದಿಗೆ ವ್ಯಕ್ತಿಗಳನ್ನು ಹೆಣೆಯುವುದಕ್ಕೆ. ಎಣಿಸಲಾಗದಷ್ಟು ಸಮಸ್ಯೆಗಳು ನಮ್ಮ ದೇಶದ ಮುಂದಿವೆ. ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಆಂದೋಲನಗಳಿಗಾಗಿ ಕೆಲವನ್ನ ಪಟ್ಟಿ ಮಾಡಬಹುದು. ಈ ಲೇಖನದಲ್ಲಿ ಅಂಥ ಒಂದು ಪ್ರಯೋಗವನ್ನು ಪೂರ್ವಭಾವಿಯಾಗಿ ದೇಶದ ಸಮಾಜವಾದಿ ಅವಶ್ಯಕತೆಗನುಸಾರವಾಗಿ ಮಾಡಲಾಗಿದೆ.

**ತಪ್ಪಿದ ಕೊಂಡಿ :**

ಸಧ್ಯದ ಪಾರ್ಲಿಮೆಂಟನ್ನು ವಿಧಾನ ಸಭೆಯನ್ನಾಗಿ ಪರಿವರ್ತಿಸುವ ಮೂಲಕ ಹಾಗೂ ಚುನಾವಣೆಗಳನ್ನು ನಡೆಸಿ ವಿಧಾನಸಭೆಯನ್ನು ಕೂಡ ಪುನರ್‌ರಚಿಸುವ ಮಟ್ಟದ ಸೀಮಿತ ಸರ್ವಾಧಿಕಾರ ಕುರಿತ ಅಂತೆ ಕಂತೆಗಳಿವೆ. ಇದು ಯಾತಕ್ಕಾಗಿ ? ಭಾರತೀಯ ಸಂವಿಧಾನದ ಕನಿಷ್ಠ ತಳಹದಿಯಾದರೂ ಏನು ? ಈ ಪ್ರಶ್ನೆಗಳಿಗೆ ಬಾಬಾಸಾಹೇಬರು ತಮ್ಮ "ಸ್ಟೇಟ್ಸ್ ಅಂಡ್ ದಿ ಮೈನಾರಿಟೀಸ್"ಎಂಬ ಪ್ರಬಂಧದಲ್ಲಿ ಉತ್ತರವಿತ್ತಿದ್ದಾರೆ. ಅಂಥ ಒಂದು ಅತ್ಯಂತ ಪ್ರಮುಖ ವಿಚಾರ ಕುರಿತು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ಸಲಹೆ ಮಾಡಿದಾಗ್ಯೂ ಸಂವಿಧಾನ ಅದನ್ನು ಒಳಗೊಳ್ಳಲೇ ಇಲ್ಲ. "ಸಮಾಜವಾದ"ವು ನಮ್ಮ ರಾಷ್ಟ್ರ ಜೀವನದ ಗುರಿಯಾಗಬೇಕು. ಹಾಗಂತ ನಮ್ಮ ಸಂವಿಧಾನದಲ್ಲಿ ನಿರ್ದಿಷ್ಟವಾಗಿ ಉಲ್ಲೇಖಿಸಲ್ಪಡಬೇಕು. ಆದರೆ ಕಾಂಗ್ರೇಸ್‌ನಲ್ಲಿ ತಾವು ಸಮಾಜವಾದಿ ಎಂದು ಗುರುತಿಸಿಕೊಂಡಿದ್ದ ಪಂಡಿತ ನೆಹ್ರೂರಂಥ ವ್ಯಕ್ತಿಯೂ ಏಕೆ ಈ ವಿಚಾರವನ್ನು ಒಪ್ಪಿಕೊಳ್ಳಲಿಲ್ಲ ಎಂಬುದರ ಬಗ್ಗೆ ಆಳವಾದ ಸಂಶೋಧನೆ ನಡೆಯಬೇಕಾಗಿದೆ. ಡಾ॥ ರಾಜೇಂದ್ರ ಪ್ರಸಾದ್‌ರು ಕಾಂಗ್ರೇಸಿನ ಮೇಲೆ ಪ್ರಭಾವ ಬೀರಬಲ್ಲವರೂ, ವಿಧಾನಸಭಾಧ್ಯಕ್ಷರೂ ಆಗಿದ್ದವರು. ಇನ್ನೊಬ್ಬರು ಸರ್ದಾರ್ ಪಟೇಲರು. ಪಂಡಿತನೆಹ್ರೂ ಈ ಇಬ್ಬರೊಂದಿಗೂ ರಾಜಿ ಮಾಡಿಕೊಂಡಿದ್ದರೆಂಬುದು ಈಗೀಗ ಗೊತ್ತಾಗುತ್ತಿದೆ. ಡಾ॥ ಅಂಬೇಡ್ಕರ್‌ರ ಕೊನೆಯ ಅಪ್ರಕಟಿತ ನಿಬಂಧದಲ್ಲಿ ನಮ್ಮ ಪ್ರಥಮ ರಾಷ್ಟ್ರಪತಿಗಳ ಸಾಮಾಜಿಕ ದೃಷ್ಟಿಕೋನ ಎಂಥದು ಎಂಬುದನ್ನು ಬಯಲಿಗೆಳೆಯಲಾಗಿದೆ. ಈಗ, ಶ್ರೀಮತಿ ಇಂದಿರಾಗಾಂಧಿ ಹೊಸ ದಿಕ್ಕಿನಲ್ಲಿ

**ಅಂಬೇಡ್ಕರ್ ವೇದಿಕೆ**

**ಡಾ॥ ಎಂ. ಜಿ. ಬೊಕಾರೆ**

ಚಲಿಸುತ್ತಿದ್ದಾರೆ. ಸಾಧನೆಯಂತೂ ಉಪೇಕ್ಷಣೀಯ. ಅಲ್ಲದೆ ಸಮಯ ಹಿಡಿಯುವಂಥದ್ದು. ಭಾರತ ಒಂದು ವೇಳೆ ಸಂವಿಧಾನವನ್ನು ತಿದ್ದುವುದಾದಲ್ಲಿ ಅಥವಾ ಹೊಸದಾಗಿ ರಚಿಸುವುದಾದಲ್ಲಿ ಡಾ॥ ಅಂಬೇಡ್ಕರ್ ಸೂಚಿಸಿದ ಎರಡು ಪ್ರತ್ಯಯಯುಗಳನ್ನು ಒಳಗೊಳ್ಳಲೇಬೇಕು. ಒಂದು, ಸಮಾಜವಾದವು ನಮ್ಮ ಗುರಿಯಾಗಬೇಕು. ಎರಡನೆಯದು, ಭೂಮಿ ರಾಷ್ಟ್ರೀಕರಣಗೊಳ್ಳಬೇಕು. ಇಂದಿರಾಗಾಂಧಿ ದಿಟಕ್ಕೂ ಪ್ರಗತಿಪರ ಕಾರ್ಯಗಳಲ್ಲಿ ತೊಡಗುವುದಾದಲ್ಲಿ ಈ ಎರಡು ಅಂಶಗಳನ್ನು ಆಕೆ ಕೈಗೆತ್ತಿಕೊಳ್ಳಬೇಕು. ಆದರೆ ಪಾರ್ಲಿಮೆಂಟಿನ ಶಕ್ತಿ ಆಕೆಯ ಕೈಯಲ್ಲಿದೆ. ನಿಜವಾದ ಬಡವರು ಕೂಡ ತಮ್ಮ ಕಾರಣ ಪುರುಷನು ಕಂಡ ಕನಸು ಆಕೆಯಿಂದ ನನಸಾದೀತು ಎಂಬ ಆಶಯದ ಕಾರಣ ಆಕೆಗೆ ಬೆಂಬಲ ನೀಡುತ್ತಲಿದ್ದಾರೆ.

ಇಂದು ನಮ್ಮಲ್ಲಿ ತಿಳಿವಿನಿಂದ ಕೂಡಿದ ಒಂದು ರಾಷ್ಟ್ರೀಯ ವಾತಾವರಣವಿದೆ. ಹೆಚ್ಚು ಕಡಿಮೆ ಎಲ್ಲ ರಾಜಕೀಯ ಪಕ್ಷಗಳೂ ತಮಗೆ ಸಮಾಜವಾದ ಬೇಕು ಎಂದು ಸಾರಿವೆ. ಸಂವಿಧಾನದಲ್ಲಿ ಸಮಾಜವಾದದ ಪ್ರತ್ಯಯ ಅಥವಾ ಪರಿಚ್ಛೇದವೊಂದಕ್ಕಾಗಿ ಡಾ॥ ಅಂಬೇಡ್ಕರರು ಇಂತಹ ವಾತಾವರಣವನ್ನು ಬಯಸಿದ್ದರು. ಪಕ್ಷಗಳು ಈ ಗುರಿಯನ್ನು ತಲುಪುವ ಪಥ, ಪ್ರಾಶಸ್ತ್ಯಗಳಲ್ಲಿ ಹಾಗೂ ತಮ್ಮ ಕಾರ್ಯನೀತಿಯಲ್ಲಿ ಪರಸ್ಪರ ಭಿನ್ನವಾಗಬಹುದು. ಆದರೆ ಯಾರೂ ಕೂಡ ನಮ್ಮನ್ನು ಸಮಾಜವಾದಿ ಆದರ್ಶದಿಂದ ಪಲ್ಲಟಗೊಳಿಸಲಾರರು.

**ಕಾರ್ಯವಿಧಾನ :**

ಯಾವುದೇ ಕಾರ್ಯವಿಧಾನವಾದರೂ ಭಾರತದಲ್ಲಿರುವಂಥ ವಸಾಹತು ಆರ್ಥಿಕ ವ್ಯವಸ್ಥೆಯಲ್ಲಿ ಅದು ಮೊದಲು ದುಡಿಯುವ ಜನ ಹಾಗೂ ಉತ್ಪಾದನಾ ಮಾರ್ಗ ಇವುಗಳ ನಡುವಿನ ಸಂಬಂಧವನ್ನು ಸುಗಮಗೊಳಿಸಬೇಕು. ಭಾರತದಲ್ಲಿ ಬಹುಸಂಖ್ಯಾತ ವ್ಯಕ್ತಿಗಳು ಕೃಷಿಯನ್ನವಲಂಬಿಸಿ ಬದುಕುತ್ತಿದ್ದಾರೆ. ಭೂಮಿಯೇ ಇಲ್ಲಿನ ಪ್ರಧಾನ ಉತ್ಪಾದನಾ ಮೂಲ. ಭೂ ಒಡೆತನಕ್ಕೆ ಸಂಬಂಧಿಸಿದಂತೆ ಡಾ॥ ಅಂಬೇಡ್ಕರರು ಹೇಳುತ್ತ, ಜಾತಿ ವ್ಯವಸ್ಥೆಯು ಹೇಗೆ ಭೂಮಿಯೊಂದಿಗೆ ಸಂಬಂಧವಿರಿಸಿಕೊಂಡಿದೆ ಎಂಬುದನ್ನು ಅತ್ಯಂತ ಸಮಂಜಸವಾಗಿ ಚಿತ್ರಿಸಿದ್ದಾರೆ. ಹಿಂದೂ ಸಮಾಜದೊಳಗಿನ ಜಾತಿಗಳೆಲ್ಲವೂ ಕೌಶಲ ಪ್ರಧಾನವಾದವುಗಳು. ಆದರೆ ಅದೊಂದು 'ಶ್ರಮ ವಿಭಜನೆ' ಎಂಬ ನೆಪದಲ್ಲಿ ಸಮರ್ಥಿಸಿ ಕೊಳ್ಳಲಾಗುತ್ತಿದೆ. ಸ್ಮಿತ್ ಪರಿಕಲ್ಪನೆಯ ಪ್ರಕಾರ ಶ್ರಮ ವಿಭಜನೆ ಎಂಬುದು 'ಮುಕ್ತ ಸಮಾಜ; ಸ್ವತಂತ್ರ ಶ್ರಮಿಕ, ಆಗಿರುತ್ತದೆಂದು, ಅಂಬೇಡ್ಕರ್ ಹೇಳುತ್ತಾರೆ. ಭಾರತದಲ್ಲಿ ಮಾತ್ರ "ನಾವು ಶ್ರಮದೊಂದಿಗೆ ಶ್ರಮಿಕರನ್ನೂ ವಿಭಜಿಸಿದ್ದೇವೆ" ಸೂಕ್ಷ್ಮವೂ, ಸೈದ್ಧಾಂತಿಕವಾಗಿ ಅಮೂಲ್ಯವೂ ಆದ ಈ ಅಂತರವನ್ನು ಗಮನಿಸಬೇಕು.

ಹಾಗಾದರೆ ಜಾತಿಯನ್ನು ಒಡೆಯಲು ಪ್ರೇರಕ ಶಕ್ತಿ ಯಾವುದು? ಈ ಪ್ರಶ್ನೆಗೆ ಡಾ॥ ಅಂಬೇಡ್ಕರರು ಅಮೋಘವಾದ ಉತ್ತರವಿತ್ತಿದ್ದಾರೆ. ಅದೇ, ಭೂಮಿಯ ರಾಷ್ಟ್ರೀಕರಣ ಹಾಗೂ ಕೃಷಿಯ ಯಂತ್ರೀಕರಣ. ಇದೇನು ಕಮ್ಯೂನಿಸ್ಟ್ ತತ್ವದ ಅನುಷ್ಠಾನವಲ್ಲ. ಭಾರತದಲ್ಲಿಯೇ ಪಡೆದ ಅನುಭವದ ಬೆಳಕಲ್ಲಿ ಕಂಡ ವಾಸ್ತವ ಪರಿಹಾರ.

ಯಂತ್ರೀಕರಣ ಅಥವಾ ಕೈಗಾರಿಕೀಕರಣ, ಜಾತಿ ಮತ್ತು ಧಾರ್ಮಿಕ ಸಮುದಾಯಗಳನ್ನು ಮೀರಿ ಅವುಗಳನ್ನು ಸೀಳಿಕೊಂಡು ಮುನ್ನಡೆಯಬಲ್ಲದು. ಯಂತ್ರವು ಮತ್ತದರ ಸಂಚಾಲನವು ಹೊಸದೊಂದು ಶ್ರಮಿಕ ವರ್ಗವನ್ನು ಬಯಸುತ್ತದೆ. ಹೊಸದರಲ್ಲಿ, ಆರ್ಥಿಕವಾಗಿ ದಾರುಣ ಸ್ಥಿತಿಯಲ್ಲಿರುವ ಸಮೂಹಗಳಲ್ಲಿ ಇಂಥ ಶ್ರಮಿಕ ವರ್ಗ

ವನ್ನು ಕಾಣಲುಸಾಧ್ಯವಾಗುತ್ತದೆ. ಕಡಿಮೆ ಆದಾಯ ಸಮೂಹವು ಈ ರೀತಿ ಹೊಸದಾಗಿ ರೂಪುಗೊಳ್ಳುವ ಶ್ರಮಿಕ ವರ್ಗಕ್ಕೆ ಮೊದಲು ಪಾದಾರ್ಪಣ ಮಾಡುತ್ತದೆ. ಏಕೆಂದರೆ ಇಂಥ ವರ್ಗಾವಣೆ ಅವರನ್ನು ಅನೇಕ ಬಗೆಯ ಸಾಮಾಜಿಕ ಬಂಧನಗಳಿಂದ ಮುಕ್ತಗೊಳಿಸಬಲ್ಲದು. ಎರಡನೆಯದಾಗಿ ಅದು ಅವರನ್ನು ಒಂದು ವೃತ್ತಿಪ್ರಧಾನವಾದ ಶ್ರಮಿಕ ವರ್ಗಕ್ಕೆ ಪ್ರವೇಶಮಾಡಿಸುತ್ತದೆ. ಹೀಗಾಗಿ ಜಾತಿಯ ಸ್ಥಾನದಲ್ಲಿ ಇಂದು ವೃತ್ತಿ ಸಮೂಹಗಳನ್ನು ನೋಡಲು ಸಾಧ್ಯವಾಗಿದೆ. ಎಂಜಿನ್ ಚಾಲಕರು ಟಿಕೆಟ್ ಕಲೆಕ್ಟರರು, ಮುಂತಾಗಿ. ಆದರೆ ಈ ಪ್ರವೇಶವು ಒಂದು ನಿರ್ದಿಷ್ಟ ತರಬೇತಿ ಮತ್ತು ಅನುಭವವನ್ನು ಅವಲಂಬಿಸಿರುತ್ತದೆ ಎಂಬುದೇನೋ ನಿಜ.

ಆದ್ದರಿಂದ, ಕೃಷಿಯ ಯಂತ್ರೀಕರಣವೂ ಕೂಡ ನಮ್ಮ ರೋಗಗ್ರಸ್ಥ ಹಳ್ಳಿಗಳಿಗೆ ಆದೊಂದೇ ಪರಿಹಾರ. ಹಣರೂಪದ ಲಾಭನಷ್ಟಗಳು ಇಲ್ಲಿ ಮುಖ್ಯವಲ್ಲ. ಅದು ಕೇವಲ ವಿದ್ಯಾರ್ಥಿಯ ಅಭ್ಯಾಸ ಕ್ರಮವಾದೀತು. ಏಕೆಂದರೆ ಹಳ್ಳಿಗಳಲ್ಲಿ ಅನೂಚಾನವಾಗಿ ನಡೆದುಬಂದಿರುವ ಜಾತಿಪದ್ಧತಿಯನ್ನು ಧೂಳೀಪಟ ಮಾಡಿದಾಗ ದೊರೆಯುವ ಲಾಭವನ್ನು ಹಣದಿಂದ ಅಳೆಯಲು ಸಾಧ್ಯವಿಲ್ಲ. ಇಲ್ಲಿನ ನೀತಿ ಇಷ್ಟೆ. ನಮಗೆ ಸಲ್ಲದ ಸಂಗತಿ ನಾಶವಾಗಬೇಕು. ನಮಗೆ ಬೇಕಾದದ್ದು ಬೆಳೆಯಬೇಕು. "ವಿಭಾಗಿತ ಶ್ರಮದ" ಸ್ಥಾನಕ್ಕೆ "ಶ್ರಮವಿಭಜನೆ" ಬರಬೇಕು. ಆಡಮ್ ಸ್ಮಿತ್‌ನ ಕಾಲದಿಂದಲೂ ಇದೇ ಎಲ್ಲ ಪ್ರಗತಿಪರ ಅರ್ಥವ್ಯವಸ್ಥೆಗಳಿಗೂ ಬುನಾದಿಯಾಗಿದೆ.

ಭಾರತದ ಗ್ರಾಮಗಳು ಇಂದಿಗೂ ಜಾತಿ ಮತ್ತು ಧರ್ಮದ ನೆರಳಲ್ಲಿಯೇ ಇವೆ. ನಮ್ಮ ಚುನಾವಣೆಗಳು ಕೂಡ ಗ್ರಾಮಶಕ್ತಿಗಿಂತಲೂ ಜಾತಿ ಶಕ್ತಿಯನ್ನೇ ಅವಲಂಬಿಸಿವೆ. ಗ್ರಾಮ ಜೀವನವನ್ನು ಸಮಾನತೆಯ ಜೀವನಕ್ಕಾಗಿ ಪರಿವರ್ತಿಸುವ ಸಾಧ್ಯತೆಯು ಕೇವಲ ಕೃಷಿಯ ಯಂತ್ರೀಕರಣದಲ್ಲಿ ಅಡಗಿದೆ. ಇದನ್ನು ವ್ಯಕ್ತಿ ಮಟ್ಟದಲ್ಲಿ ಅನುಷ್ಠಾನಗೊಳಿಸಲೂ ಸಾಧ್ಯವಿಲ್ಲ. ಸಾಮಾಜಿಕ ಪರಿವರ್ತನೆಯು ಸಾಮಾಜೀಕರಣದಿಂದ ಮಾತ್ರ ಸಾಧ್ಯ. ಈ ಅಂಶಗಳನ್ನು ಡಾ॥ ಅಂಬೇಡ್ಕರರು ವಿಧಾನ ಸಭೆಯ ಸಂದರ್ಭದಲ್ಲಿ ಸಲ್ಲಿಸಿದ "ಸ್ಟೇಟ್ಸ್ ಅ್ಯಂಡ್ ಮೈನಾರಿಟೀಸ್" ಎಂಬ ಪ್ರಬಂಧದಲ್ಲಿ ಉಲ್ಲೇಖಿಸಿದ್ದಾರೆ. ಆದಾಗಿ ಇಲ್ಲಿಗೆ ಕಾಲು ಶತಮಾನಕ್ಕಿಂತಲೂ ಹೆಚ್ಚು ಕಾಲ ಕಳೆಯಿತು. ನಮ್ಮ ಕೃಷಿಯಲ್ಲಾಗಲಿ, ಗ್ರಾಮ ಜೀವನದಲ್ಲಾಗಲಿ ಜಾತಿಯ ಹಾಗೂ ಧಾರ್ಮಿಕ ಪೂರ್ವಾಗ್ರಹಗಳ ವಿನಾಶದ ಸುಳಿವು ಕಾಣಲಿಲ್ಲ. ಡಾ॥ ಅಂಬೇಡ್ಕರರ ಸೂಚನೆಯನ್ನು ಜಾರಿಗೆ ತರಲು ಒಂದು ಪ್ರಯೋಗ ಏಕೆ ನಡೆಸಬಾರದು? ಜಾತಿಲೀನ ಗ್ರಾಮಸಮಾಜವನ್ನು ಒಂದು ನಿಸರ್ಗಸಹಜ ಶ್ರಮ ವಿಭಜನೆಯನ್ನಾಗಿ ಮಾಡುವಂಥ ಸಾಂಸ್ಕೃತಿಕ ಪರಿವರ್ತನೆಯು ಆಧುನಿಕ ಕೈಗಾರಿಕೀಕರಣ ನೀತಿಯಿಂದ ಮಾತ್ರ ಸಾಧ್ಯ. ನಗರಗಳಲ್ಲಿ ಇಂಥದು ಅನುಭವಕ್ಕೆ ಬಂದಿದೆ. ಆದರೆ ಗ್ರಾಮಭಾರತದಲ್ಲಿ ಏಕೆ ಈಗಲಾದರೂ ಪ್ರಯತ್ನಿಸಬಾರದು ?

ಸಾಮಾಜಿಕ ಬದಲಾವಣೆಯ ಇತಿಹಾಸ ನಮಗೆ ಪಾಠ ಕಲಿಸಿದೆ. ಏನೆಂದರೆ ಸಮಾಜವಾದಕ್ಕಾಗಿ ಹೋರಾಡುವ ವರ್ಗದಲ್ಲಿ "ಸಿದ್ಧಾಂತ"ವು ಬಹು ಚೆನ್ನಾಗಿ ಕೃಷಿಗೊಂಡಿರಬೇಕು. ಎರಡನೆಯದಾಗಿ ಇಂಥ ವರ್ಗದ ಗುರುತರ ಗಾತ್ರವು ಲೌಕಿಕ ದೃಷ್ಟಿಯದಾಗಿರಬೇಕು. ಮೂರನೆಯದಾಗಿ ಯಂತ್ರದ ಶ್ರಮಿಕವರ್ಗವು ಗ್ರಾಮೀಣ ಅರ್ಥವ್ಯವಸ್ಥೆಯೊಂದಿಗೆ ಸಜೀವ ಸಂಬಂಧವನ್ನು ಹೊಂದಿರಬೇಕು. ಈ ಮೂರೂ ಅಂಶಗಳು ಅಂಬೇಡ್ಕರರ ಒಟ್ಟು ಪಾತ್ರದಲ್ಲಿ ಕಂಡುಬರುತ್ತವೆ. ಬೌದ್ಧರು ಎಂದು ಕರೆಯಲ್ಪಡುವ ಧಾರ್ಮಿಕ ವರ್ಗವು ಲೌಕಿಕ ವರ್ಗವಾಗಿದೆ.

ಗೌತಮ ಬುದ್ಧನು ಕೇವಲ ಲೌಕಿಕನಾಗಿರದೆ ಜಾತಿ ಜನ್ಯನಲ್ಲದವನಾಗಿದ್ದನು. ಡಾ॥ ಅಂಬೇಡ್ಕರರು ಅನೇಕ ಆಧುನಿಕ ವಿಜ್ಞಾನಗಳನ್ನೂ ಪರಿಶೀಲಿಸಿ, ಹೋಲಿಸಿ ಅಧ್ಯಯನ ಮಾಡಿದನಂತರ ಧರ್ಮವನ್ನು ಖಚಿತವಾದ ವಿಚಾರಗಳಲ್ಲಿ ಲೌಕಿಕರಾಗಿದ್ದಾರೆ ಎಂದಂತಾಯಿತು. ಈ ಸಮೂಹವು ಕೈಗಾರಿಕಾ ಶ್ರಮಿಕರಲ್ಲಿ, ಭೂರಹಿತ ಕಾರ್ಮಿಕರಲ್ಲಿ ಹಾಗೂ ಗ್ರಾಮದ ಸಣ್ಣ ರೈತರಲ್ಲಿ ಸಮಪ್ರಮಾಣದಲ್ಲಿ ಪ್ರಸರಿಸಿದೆ. ಇಂಥ ಸಹಜ ಸಂಬಂಧವು ಹೆಚ್ಚು ಮಹತ್ವಪೂರ್ಣವಾದುದು. ಡಾ॥ ಅಂಬೇಡ್ಕರ್ ಕೂಡ ಸಮಾಜವಾದವು ಸಂವಿಧಾನದಲ್ಲಿ ಅಲ್ಪ ಸಂಖ್ಯಾಕರ ಹಕ್ಕು ರಕ್ಷಣೆಗಾಗಿ ಒದು ಪರಿಚ್ಛೇದವಾಗಬೇಕೆಂತಲೂ ಹೇಳಿದರು. ನಾವು ಭಾರತೀಯ ಸಮಾಜವಾದದ ಸಂಧಿಕಾಲದಲ್ಲಿದ್ದೇವೆ. ಡಾ॥ ಅಂಬೇಡ್ಕರ್ ಈ ಸಂದರ್ಭದಲ್ಲಿ ನಮಗೆ ಕಾರ್ಯವಿಧಾನಾತ್ಮಕವಾದ ಸಮಾಜವಾದದ ದಾರಿಗಳನ್ನು ತೋರಿಸಿದ್ದಾರೆ.

ಅಂತೆಯೇ ಅಂಬೇಡ್ಕರ್ ಜೀವನ–ಕೃತಿಯ ಪ್ರಾಂಗಣದಿಂದ ನಮಗೆ ದೊರೆತ ಮತ್ತೊಂದು ಸಂಗತಿಯೆಂದರೆ ಭಾರತೀಯ ಬೌದ್ಧರು. ಈ ವರ್ಗವು ತಾನೇ ತಾನಾಗಿ ಸಮಾಜವಾದಿ ಪರಿವರ್ತನೆಯನ್ನುಂಟು ಮಾಡಬಲ್ಲದು. ಈ ಮಾತಲ್ಲಿ ಎಳ್ಳಷ್ಟಾದರೂ ಸತ್ಯವಿದ್ದಲ್ಲಿ ಇತರ ವರ್ಗಗಳೂ, ತಮಗೆ ಮಿತಿಗಳಿದ್ದಾಗ್ಯೂ ಬೌದ್ಧರೊಂದಿಗೆ ಸೇರುವುದೊಳಿತು. ಇಂಥ ವರ್ಗಗಳು ಈಗಾಗಲೇ ಅಲ್ಲಲ್ಲಿ ಇವೆ. ಉದಾ : ಫ್ಯಾಕ್ಟರಿಯಲ್ಲಿ ದುಡಿಯುವ ಸಂಘಟಿತ ಕಾರ್ಮಿಕರು, ಕಛೇರಿಗಳಲ್ಲಿನ ಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿನ ಮಧ್ಯಮ ವರ್ಗದ ನೌಕರರು. ಆದರೆ ಗ್ರಾಮೀಣ ಕಾರ್ಮಿಕರು ಮತ್ತು ಸಣ್ಣ ರೈತರು ಮಾತ್ರ ಸಂಘಟಿತರಾಗಿಲ್ಲ. ಇಲ್ಲಿಯೂ ಬೌದ್ಧರಿರಬಹುದು. ಲೆಕ್ಕಾಚಾರದಂತೆ ಬೌದ್ಧರನ್ನು ಒಂದು ವರ್ಗವೆಂದು ಪರಿಗಣಿಸುವುದಾದರೆ ಅದು ಶ್ರಮಿಕ ವರ್ಗದ ಒಂದು ಉಪ–ಪಂಗಡವಾಗಿರುತ್ತದೆ. ಬೌದ್ಧೇತರವಾದ ಶ್ರಮಿಕ ವರ್ಗದಲ್ಲಿನ ಒಂದು ಲೋಪವೆಂದರೆ ಅವುಗಳಿಗೆ ಕೆಲ ಮಟ್ಟಿಗೆ ಅಲೌಕಿಕ ಪಂಥದ ವಾಸನೆಯಿದೆ. ಹಿಂದೂ ಮುಸ್ಲಿಮ್ ಹಾಗೂ ಕ್ರಿಶ್ಚಿಯನ್ನರು ಈ ಎಲ್ಲರೂ ಅಲೌಕಿಕವಾದಿಗಳೇ. ಬೌದ್ಧರು ಮಾತ್ರವೇ ಅತ್ಯಂತ ನಿಚ್ಚಳವಾಗಿ ಲೌಕಿಕರಾಗಬಲ್ಲರು. ಧರ್ಮ ಆಧಾರಿತ ಶ್ರಮಿಕ ವರ್ಗಗಳು ಕೂಡ ತಾವು ಕಾರ್ಯೋನ್ಮುಖರಾಗಿದ್ದಾಗ ತಮ್ಮ ಧಾರ್ಮಿಕ ದೌರ್ಬಲ್ಯವನ್ನು ಬಿಟ್ಟಿರಬಲ್ಲವು. ರಾಜಕೀಯ ಚಟುವಟಿಕೆಗಳಲ್ಲಿ, ಸಂಪು ಮುಂತಾದವುಗಳಲ್ಲಿ ಭಾಗವಹಿಸುವಾಗ ಈ ಅಂಶ ಅವುಗಳಿಗೆ ಅಡ್ಡಿ ಬರಬಾರದು. ರಾಜ್ಯ ಅಥವಾ ಬಂಡವಾಳಶಾಹೀ ವಿಚಾರವಲ್ಲಿ ಅವುಗಳ ವರ್ಗ ಪ್ರಜ್ಞೆಗೆ ಧಾರ್ಮಿಕ ಪ್ರವೃತ್ತಿ ವಿಶೇಷವಾಗಿ ಬಾಧಿಸಲಿಕ್ಕಿಲ್ಲ. ಸಂಬಳದ ಹೆಚ್ಚಳಕ್ಕಾಗಿ ಅಥವಾ ಬೋನಸ್ ಬೇಡಿಕೆಗಾಗಿ ಅವು ಕ್ರಿಯಾರಂಗಕ್ಕಿಳಿದಾಗ ಇವುಗಳು ಧರ್ಮಬೋಧೆಯನ್ನು ಉದಾ ; ಹಣಕ್ಕಾಗಿ ಮನುಷ್ಯ ಆಸೆ ಪಡಬಾರದು, ರಾಜ್ಯವು ದೇವರ ಸಂಕೇತ ಮೊದಲಾದುವುಗಳನ್ನು ಗೌರವಿಸಲಾರವು. ಈ ಸತ್ಯವನ್ನು ಎಂದಿಗೂ ಮರೆಯಲಾಗದು. ಏಕೆಂದರೆ ಭಾರತದಲ್ಲಿ ಇಂಥ ಸಂಗತಿಗೆ ಸಾಕಷ್ಟು ಅನುಭವದ ಆಧಾರವಿದೆ.

**ಧರ್ಮದ ಆಯ್ಕೆಗೆ ಇರುವ ಸ್ವಾತಂತ್ರ್ಯ :**

ಇಂದು, ಲೌಕಿಕ ಬೌದ್ಧರೂ, ಅಲೌಕಿಕ ಇತರರೂ ತಮ್ಮ ನಾಗರಿಕ ಜೀವನದಲ್ಲಿ ಯಾವುದೇ ಜಾತಿ ಸಂಘರ್ಷದಿಂದ ತಮ್ಮನ್ನು ರಕ್ಷಿಸಿಕೊಳ್ಳಬೇಕು ಎಂಬ ಸಹಜ ನಿರ್ಣಯಕ್ಕೆ ಬರುವಂತಾಗಿದೆ. ಧಾರ್ಮಿಕ ಸಂಘರ್ಷಗಳು ವರ್ಗರಹಿತ ಸಮಾಜ ಕಲ್ಪನೆ ಆಗಿರುವ ಸಮಾಜವಾದದ ಗುರಿಯನ್ನು ಸಾಧಿಸುವುದರಲ್ಲಿ ಅಪಾಯವೊಡ್ಡುವವು. ಈ

# ನನ್ನ ಕವಿತೆಯ ನೆಲ ಭೂಮಿ: ನಾಮದೇವ ಢಸಾಳ

ಾಮದೇವ ಢಸಾಳ–ಇವರದು ಇಂದಿನ
ೇ ಕಾವ್ಯದಲ್ಲಿ ವಿಶಿಷ್ಟ ಹಾಗೂ ಅನನ್ಯವಾದ
ಇವರು ಮಹಾರಾಷ್ಟ್ರದ ದಲಿತ ಸಂಘಟ
ಒಬ್ಬ ಸಂಸ್ಥಾಪಕರು. ದಲಿತ ಕಾವ್ಯ
ಕದಲ್ಲಿ ಎಲ್ಲರಿಗಿಂತ ಹೆಚ್ಚಿನ ಮಹತ್ವದ ಕವಿ.
ನಿಸ್ಟ ವಿಚಾರ ಧಾರೆಯೊಂದಿಗೆ ಇವರ
ಕಿ; ದಲಿತರ ಕೈಗೆ ರಾಜ್ಯದ ಶಾಸನ-ಸತ್ತೆ
ಕು, ದಲಿತರ ಡಿಕ್ಟೇಟರ್‌ಶಿಪ್ ಸ್ಥಾಪಕ
ೇಕು. ಅದಲ್ಲದೆ ದಲಿತರ, ನಿಮ್ನ ವರ್ಗಗಳ
ಜನ ಸಮುದಾಯದ ವಿಮೋಚನೆ ಸಾಧ್ಯವಿಲ್ಲ
ಕವಿ ಢಸಾಳರ ಪ್ರಾಮಾಣಿಕ ಪ್ರತಿಪಾದನೆ.
ಇದರಿಂದಾಗಿ ದಲಿತ ಪ್ಯಾಂಥರ್ ಸಂಘಟನೆ
ೊಡೆಯಿತು. ಇನ್ನೊಂದು ಕವಲು ದಲಿತರಿಗೆ
ಾಜಿಕ ನ್ಯಾಯ ಹಾಗೂ "ಸವರ್ಣ"ರೊಂದಿಗೆ
ಮಾನತೆ ತಂದು ಕೊಡಬೇಕೆಂಬ ಸುಧಾರಣಾ
ಯುವರದು. ಈ ಕವಲಿಗೆ ಶ್ರೀ ಅರುಣ
ಳೆ ಮುಖ್ಯರು.
ಉಭಯ ಕವಲುಗಳಿಗೂ ಮೂಲದ ಪ್ರೇರಣೆ
ರ್ತಿ ಡಾ॥ ಅಂಬೇಡ್ಕರರ ಆಂದೋಲನವೇ.
ಅರುಣ ಕಾಂಬಳೆಯವರ ಅನುಯಾಯಿಗಳ
ಸಾಮಾಜಿಕ ವಿಷಮತೆಯ ಉಚ್ಚಾಟನೆಯ

ಮೇಲೆ. ಅಂದರೆ ಅವರೇ ಹೆಚ್ಚಾಗಿ ಅಂಬೇಡ್ಕರ್ ಪ್ರಣೀತ ನವಬೌದ್ಧ ಮಹಾರ ಚಳವಳಿಗೆ ಸೇರಿದವರು.

ನಾಮದೇವ ಢಸಾಳರ ಜನ್ಮ 1946ರಲ್ಲಿ. "ವಿದ್ರೋಹ" ನಿಯತಕಾಲಿಕದ ಸಂಪಾದಕರು. "ಗೋಲಪೀಠಾ" ಈ ಮೊದಲ ಸಂಕಲನದಿಂದಲೇ ಸಮಕಾಲೀನ ಮರಾಠಿ ಕಾವ್ಯದಲ್ಲಿ ಇವರಿಗೆ ಮಹತ್ವದ ಸ್ಥಾನ. "ಮೂರ್ಖಮ್ಹಾತಾರ್ಯಾನೆ ಡೋಂಗರ

## ಒಂದು ಪರಿಚಯ

ಹಾಲವಲೆ" (ಈ ಮೂರ್ಖ ಮುದುಕನು ಗುಡ್ಡ ಅಲುಗಾಡಿಸಿದನು) ಇದು ಇವರ ಎರಡನೆಯ ಕವನ ಸಂಗ್ರಹ. "ಪ್ರಿಯದರ್ಶಿನಿ" ಅವರ ಸುದೀರ್ಘ ಕಾವ್ಯ 1975ರಲ್ಲಿ ಪ್ರಕಟವಾಯಿತು.

ಕಾವ್ಯದ ಬಗೆಗೆ ಅವರ ಕೈಫಿಯತ್ತು ಹೀಗೆ "ಪ್ರತಿಯೊಬ್ಬ ಕಲಾವಿದನಿಗೂ ಸ್ವಂತದ ಒಂದು ವರ್ಗ ಚರಿತ್ರವಿರುತ್ತದೆ. ನಾನೂ ಅದಕ್ಕೆ ಅಪವಾದವಲ್ಲ. ಯಾರನ್ನೂ ವ್ಯವಸ್ಥೆಯು 2000 ವರ್ಷ ಜ್ಞಾನ, ಸಂಪತ್ತು ಮತ್ತು ಮಾನ ಪ್ರತಿಷ್ಠೆಗಳಿಂದ ವಂಚಿತರನ್ನಾಗಿ ಮಾಡಿತೋ ಅಂಥ ಎಲ್ಲ ರೀತಿಯಲ್ಲೂ ದಲಿತ ವರ್ಗದ ಒಬ್ಬ ಕವಿ ನಾನು. ಈ 20ನೆಯ ಶತಮಾನದ ಕೆಳವರ್ಗದವರ ಪರಿವರ್ತನೆಯಿಂದಾಗಿ ಕಾವ್ಯದ ತನಕ ಬಂದು ತಲುಪಿದೆನು.... ನೀರು ತುಂಬಿದ ಬಕೆಟ್ ಎತ್ತುವಾಗ ನೆಲದ ಸಂಬಂಧ ಬರುತ್ತದೆ. ಆದ್ದರಿಂದ ನನ್ನ ಕವಿತೆಯ ನೆಲ ಭೂಮಿ. ನನಗೆ ನನ್ನ ಹಾಗೂ ನನ್ನ ಕವಿತೆಯ ವರ್ಗಮೂಲವನ್ನು ಹೇಳುವಾಗ ಅಭಿಮಾನವೆನಿಸುತ್ತದೆ....ನಾನು ಒಂದು ಕವಿತೆ ಬರೆಯುತ್ತೇನೆ. ಅಂದರೆ ಒಂದು ರಾಜಕೀಯ ಕೃತ್ಯವನ್ನೇ ಮಾಡುತ್ತೇನೆ. ಇದೆಲ್ಲ ಅತ್ಯಂತ ಅಗತ್ಯದೊಳಗಿಂದಲೇ ಒದಗಿ ಬರುತ್ತದೆ. ಎಳೆದು ಜಗ್ಗಿ ತಂದು ಮಾಡಬೇಕಾಗುವುದಿಲ್ಲ. ನನ್ನ ಕವಿತೆ ಹಳ್ಳಿ-ಹಟ್ಟಿಗಳ ಬಟಾಬಯಲು ಬಡತನದ ಬೇಧವನ್ನು ಹಿಡಿಯುತ್ತದೆ. ಅವುಗಳ ಬುಡಕ್ಕೇ ಕೊಡಲಿ ಇಕ್ಕುತ್ತದೆ. ಇದು ನಡೆಯುವಾಗ ನನ್ನ ಕವಿತೆಗೆ ಹುರಿಕಟ್ಟಾದ ಕಲಾತ್ಮಕ ಘಾಟು ಬರುತ್ತದೆ. ನನ್ನ ಕವಿತೆವರ್ಗ ಶತ್ರುಗಳೊಡನೆ ಕಡುಹಗೆಯ ಆಟವಾಡುತ್ತದೆ.... ನನ್ನ ಕವಿತೆ ಓದಿ ದಲಿತವರ್ಗ ದ್ವೇಷದಿಂದ ಎಚ್ಚೆತ್ತು ಏಳಬಹುದು–ಎಂದು ನಾನೇಕೆ ಇಚ್ಛೆ ಇಟ್ಟುಕೊಳ್ಳಬಾರದು ?

—ಗೌರೀಶ ಕಾಯ್ಕಿಣಿ

ಕೃಪೆ : ಶೂದ್ರ

---

ರುದಲ್ಲಿ ಡಾ॥ ಬಾಬಾಸಾಹೇಬರ ಸಲಹೆ
ೂಲ್ಯವಾದುದು. ಅವರು ಅನೇಕಾನೇಕ ಶಬ್ದ
ಮನುಷ್ಯನು ತನಗೆ ಬೇಕಾದ ಧರ್ಮವನ್ನು
ದ್ದುಕೊಳ್ಳಲು ಸರ್ವ ಸ್ವತಂತ್ರನೆಂದು ಹೇಳಿ
ರೆ. ಧರ್ಮವನ್ನಾಯ್ದುಕೊಳ್ಳುವ ವೈಚಾರಿ
ಯು ತೌಲನಿಕ ಅಧ್ಯಯನ ಮತ್ತು ಅನುಭವ
ನ್ನ ಆಧರಿಸಿರಬೇಕು. ಇಂಥ ಅಧ್ಯಯನವು
ರನ್ನು ಗೌರವಿಸುವುದರಿಂದ ಮತ್ತು ಧರ್ಮ
ತ ಚರ್ಚೆಗಳಲ್ಲಿ ಭಾಗವಹಿಸುವುದರಿಂದ ಸಾಧ್ಯ.
ಮುಲ್ಲಾ ಅಥವಾ ಒಬ್ಬ ಪಾದ್ರಿ ತನ್ನ
ರ್ಮ ಕುರಿತು ಮಾಡುವ ಭಾಷಣದಲ್ಲಿ ಭಾಗವಹಿ
ಮಾತ್ರಕ್ಕೆ ಯಾರೂ ತಮ್ಮತನವನ್ನು ಕಳೆದು
ಬೇಕಿಲ್ಲ ಅಥವಾ ವಿರೋಧವನ್ನು ಬೆಳೆಸಿ
ಬೇಕಿಲ್ಲ. ಇಂಥ ಅಜ್ಞಾನವನ್ನೇ ಅಸ್ತ್ರವನ್ನಾ
ಾಂಡೂ ಕೆಲವು ಪ್ರತಿಗಾಮಿ ಹಿತಾಸಕ್ತಿಗಳು
ರ್ಮಿಕ ಸಂಘರ್ಷವನ್ನು ಬೆಳೆಸುತ್ತವೆ. ಆದಾಗ್ಯೂ
ದ ಕೆಲವು ರಾಷ್ಟ್ರಗಳಲ್ಲಿ ವಿವಿಧ-ಧಾರ್ಮಿಕ
ಾಹಗಳು ಶಾಂತಿಯುತವಾಗಿ ಬಾಳುತ್ತಿರು
, ಅಷ್ಟೇ ಅಲ್ಲದೆ ಒಂದೇ ಕುಟುಂಬದ ಸದ
ಬೇರೆ ಬೇರೆ ಧರ್ಮಗಳಿಗೆ ಸೇರಿರುವುದು
ಂತ ಆಸಕ್ತಿಯ ವಿಚಾರ. ಇಂಡಿಯಾದಲ್ಲಿ

ಸಿಖ್ ಮತ್ತು ಹಿಂದೂಗಳ ನಡುವೆ ಮಾತ್ರ ನಿರಾತಂಕವಾಗಿ ಮದುವೆಗಳು ನಡೆಯಬಲ್ಲವು. ಪರಸ್ಪರರ ಸಾಂಸ್ಕೃತಿಕ ಸಭೆ ಸಮಾರಂಭಗಳಲ್ಲಿ ಮುಕ್ತವಾಗಿ ಭಾಗವಹಿಸುವುದರ ಮೂಲಕ ಹಿತಾಸಕ್ತಿಗಳು ಕಟ್ಟಿದ ಗೋಡೆಗಳನ್ನು ಕೆಡವಿ ಹಾಕಬಹುದಾಗಿದೆ. ಡಾ॥ ಅಂಬೆಂಡ್ಕರ್ ಜಾತಿ ಪದ್ಧತಿಗೆ ತೀವ್ರ ಸ್ವರೂಪದ ವಿರೋಧಿಯಾಗಿದ್ದರು ಜಾತಿಗಳನ್ನು ಕಳೆಯಲು ಅಸಮರ್ಥವಾದದ್ದು ಎಂಬ ಕಾರಣ ಹಿಂದೂ ಧರ್ಮವನ್ನು ಕಟುವಾಗಿ ಟೀಕಿಸುತ್ತಿದ್ದರು. ಬೌದ್ಧ ಧರ್ಮವನ್ನು ಸ್ವೀಕರಿಸಿದರೂ ಕೂಡ ಅವರು ಮುಸ್ಲಿಮ್ ಹಾಗೂ ಕ್ರಿಶ್ಚಿಯನ್ ಧರ್ಮಗಳನ್ನು ವೈಜ್ಞಾನಿಕತೆಯ ಹಿನ್ನೆಲೆಯಲ್ಲಿ ಪ್ರೀತಿಸುತ್ತಿದ್ದರು.

ಭಾರತದ ಶ್ರಮಿಕ ವರ್ಗ ನಿಜಕ್ಕೂ ಸಮಾಜವಾದಿ ಕ್ರಾಂತಿಯನ್ನುಂಟು ಮಾಡುವ ಆಸಕ್ತಿ ಹೊಂದಿದ್ದಲ್ಲಿ ಅವುಗಳು ಮೊದಲು ವೈಚಾರಿಕತೆಯನ್ನು ಬೆಳಸಿಕೊಳ್ಳಬೇಕು. ಎಲ್ಲ ಶ್ರಮಿಕ ವರ್ಗಗಳು ಎಲ್ಲರ ಸಾಂಸ್ಕೃತಿಕ ಸಮಾರಂಭಗಳಲ್ಲಿ ಭಾಗವಹಿಸುವಂತಾಗಬೇಕು. ವೈಜ್ಞಾನಿಕ ತಳಹದಿಯ ಮೇಲೆ ಹಿಂದೂ ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮೀಯರನ್ನು ಲೌಕಿಕರನ್ನಾಗಿ ಮಾಡುವ ಸಾಹಸಕ್ಕೆ ಬಹಳ ದಿನಗಳು ಬೇಕು. ವ್ಯಕ್ತಿಯೊಬ್ಬ ಲೌಕಿಕ ಇರುವುದು, ಇಡಿ ಸಮೂಹವೇ ಲೌಕಿಕರಾಗಿರುವುದರಿಂದ ಪೂರ್ಣ ಭಿನ್ನ. ಒಬ್ಬ ಲೌಕಿಕ ಹಿಂದೂ ಒಂದು ಲೌಕಿಕ ಕುಟುಂಬವನ್ನುಂಟು ಮಾಡುತ್ತಾನೆ. ಆದರೆ ಇಡೀ ಸಮೂಹವೇ ಲೌಕಿಕ ಆದದ್ದು ಡಾ॥ ಬಾಬಾ ಸಾಹೇಬರ ಪವಾಡವೇ ಸರಿ. ಇದು ದಮ್ಮ ಚಕ್ರ ಪ್ರವರ್ತನದ ಮಹತ್ವ. ಆದುದರಿಂದಲೇ ಅದು ಇತಿಹಾಸದಲ್ಲಿ ಅಲೌಕಿಕ ಶಕ್ತಿಗಳ ಹಿಡಿತದಿಂದ ಮುಕ್ತಗೊಳಿಸುವ ಅಮೋಘ ವರದಾನ ಎಂದು ಕರೆಯಲ್ಪಟ್ಟಿದೆ. ಯಾವ ಕಮ್ಯೂನಿಸ್ಟ್ ದೇಶವೂ ಸಹ ಶ್ರಮಿಕವರ್ಗಗಳಲ್ಲಿ ಇಂಥ ಸೌಲಭ್ಯವನ್ನು ಹೊಂದಲಿಲ್ಲ.

ಕಮ್ಯೂನಿಸ್ಟರು ವ್ಯಕ್ತಿಗತವಾಗಿ ಲೌಕಿಕರಾಗಿದ್ದರು. ವರ್ಗ ಯುದ್ಧಕ್ಕೆ ಅವರು ತೊಡಗುವ ತನಕವೂ ಸಾಮೂಹಿಕವಾಗಿ ಅವರು ಅಲೌಕಿಕತೆಯನ್ನು ತೊರೆದಿರಲಿಲ್ಲ. ಈ ಹಿನ್ನೆಲೆಯಲ್ಲಿ ಡಾ॥ ಅಂಬೇಡ್ಕರರು ಬೌದ್ಧರ ರೂಪದಲ್ಲಿ ಒಂದು ವಿಶಿಷ್ಟ ಶ್ರಮಿಕ ವರ್ಗವನ್ನು ನೀಡಿ, ಅವರಿಂದ ಸಮಾಜವಾದಿ ಕ್ರಾಂತಿಗೆ ಒಂದು ರಕ್ಷೆಯನ್ನು ಒದಗಿಸಿದ್ದರಿಂದ ಭಾರತೀಯ ಸಮಾಜವಾದದ ಮುಂದಾಳುಗಳು ಅವರಿಗೆ ಋಣಿ.

ಅನು : **ಗುರುರಾಜ್ ಬೇಡೇಕರ್**

## ಪಂಚಮ ಬಳಗ

ಈ ಸಂಚಿಕೆ ಸಮಯಕ್ಕೆ 100 ರೂಪಾಯಿ ಕಳಿಸಿ ಪಂಚಮ ಬಳಗದ ಸದಸ್ಯರಾದವರು :

19 ಶ್ರೀ ಎ. ಮುನಿವೆಂಕಟಪ್ಪ
ಬಿಡಿಒ; ಮೈಸೂರು

20 ಶ್ರೀ ಬಿ. ಗೋವಿಂದರಾವ್
ಕೋಟೇಶ್ವರ

21 ಶ್ರೀ ಎಸ್. ಶಿವಣ್ಣ
ಅಧ್ಯಾಪಕರು, ಮೈಸೂರು

22 ಶ್ರೀ ಕೆ. ಸಿ. ಬಸವರಾಜು
ಅಧ್ಯಾಪಕರು, ಮೈಸೂರು

23 ಶ್ರೀ ರಾಜೇಂದ್ರಸಿಂಗ್
ಅಧ್ಯಾಪಕರು, ಮೈಸೂರು

24 ಶ್ರೀ ಹರೀಶ್
ಸಂಶೋಧಕರು, ಮೈಸೂರು

25 ಡಾ॥ ಪೋಲಂಕಿ ರಾಮಮೂರ್ತಿ
ಅಧ್ಯಾಪಕರು, ಮೈಸೂರು

ತಮ್ಮನ್ನೆಲ್ಲ 'ಪಂಚಮ ಬಳಗಕ್ಕೆ' ಸ್ವಾಗತಿಸುವ

**ದೇವನೂರ ಮಹಾದೇವ**
ವ್ಯವಸ್ಥಾಪಕ ಸಂಪಾದಕ

---

# 'ಪಂಚಮ ಬಳಗ'ದ ಸದಸ್ಯರಾಗಿರಿ 'ಪಂಚಮ' ಪತ್ರಿಕೆ ಉಚಿತ ಪಡೆಯಿರಿ

**ಪ್ರೀತಿಯ ಪಂಚಮ ಓದುಗ ಬಂಧುಗಳೆ,**

ತಮ್ಮೆಲ್ಲರ ಚಿಂತನೆ ನೋವು ನಲಿವುಗಳಿಗೆ ಸ್ಪಂದಿಸುತ್ತಾ ಕಳೆದ 8 ವರ್ಷಗಳಿಂದ ಸಮಾಜದ ನೊಂದವರೆಲ್ಲರ ಮುಖವಾಣಿಯಾಗಿ ಹೊರಬರುತ್ತಿರುವ 'ಪಂಚಮ' ಪತ್ರಿಕೆಯು ಈಗ ಓದುಗರಿಗೆ ಹೊರೆಯಾಗದಂತ ಹೊಸ ಯೋಜನೆಯೊಂದನ್ನು ರೂಪಿಸಿದೆ. ಅದೆಂದರೆ,

ಆಸಕ್ತ ಓದುಗರು ನೂರು (100.00) ರೂಪಾಯಿಯನ್ನು ಪಂಚಮಕ್ಕೆ ಕೊಡುವುದರ ಮೂಲಕ 'ಪಂಚಮ ಬಳಗದ' ಸದಸ್ಯರಾಗವುದು. ಈ ನೂರು ರೂಪಾಯಿಯನ್ನು ಪಂಚಮವು ತನ್ನ ವೆಚ್ಚಕ್ಕೆ ಬಳಸುವುದಿಲ್ಲ. ಬದಲಿಗೆ ಈ ಹಣವನ್ನು ಬ್ಯಾಂಕಿನಲ್ಲಿ ಠೇವಣಿ ಇಟ್ಟು ಇದರಿಂದ ಬರುವ ಬಡ್ಡಿಯ ಹಣವನ್ನು ಮಾತ್ರ ಪಂಚಮವು ತನ್ನ ವೆಚ್ಚಕ್ಕೆ ಬಳಸುವುದು. ಒಂದು ಪಕ್ಷ ಪಂಚಮವು ನಿಂತು ಬಿಟ್ಟರೆ ಈ ನೂರು ರೂಪಾಯಿಯನ್ನು ಸದಸ್ಯರಿಗೆ ಹಿಂದಿರುಗಿಸಲಾಗುವುದು.

ಇಂಥ ಯೋಜನೆಯಿಂದ 'ಪಂಚಮ ಬಳಗ'ದಸದಸ್ಯರಾದವರಿಗೆ ಪಂಚಮ ಪತ್ರಿಕೆಯನ್ನು ಪಂಚಮ ಬದುಕಿರುವವರೆಗೆ ಉಚಿತವಾಗಿ ಕಳುಹಿಸಲಾಗುವುದು. ಹಾಗೂ ಇದರಿಂದಾಗಿ ಆರ್ಥಿಕವಾಗಿ ಬಳಲುತ್ತಿರುವ ಪಂಚಮಕ್ಕೆ ಒಂದು ಗಟ್ಟಿ ಆರ್ಥಿಕ ನೆಲೆ ದೊರಕಿದಂತಾಗುವುದು.

ಇಂಡಿಯಾದ ರಾಜಕೀಯದಲ್ಲಿ ಬದಲಾವಣೆಯ ಹೊಸ ಆಶೆಯಂತೆ ಬೆಳೆಯುತ್ತಿರುವ ದಲಿತ ಚಳುವಳಿ ಹಾಗೂ ಮೂರನೆ ಜಗತ್ತಿನ ನೊಂದ ಜನಸ್ತೋಮದ ನೋವು ನಲಿವು ಸಾಹಿತ್ಯ ಕಲೆ ಹೋರಾಟಗಳ ಬಗ್ಗೆ ಸಹಚಿಂತನೆ, ಕುತೂಹಲ, ಆಸ್ತೆ ಇರುವ ಎಲ್ಲರೂ ಪಂಚಮ ಬಳಗದ ಸದಸ್ಯರಾಗಬಹುದು.

ಸದಸ್ಯರಾಗಬಯಸುವವರು 100ರೂಪಾಯಿಯನ್ನು ಎಂ. ಓ. ಅಥವಾ ಡಿ.ಡಿ. ಮೂಲಕ **ಸಂಪಾದಕ, 'ಪಂಚಮ' 407, 14ನೇ ಮೈನ್, ಸರಸ್ವತೀಪುರಂ, ಮೈಸೂರು 570009**—ಈ ವಿಳಾಸಕ್ಕೆ ಕಳುಹಿಸಬೇಕೆಂದು ಕೋರುತ್ತೇವೆ.

ಸದಸ್ಯರಾದವರ ಹೆಸರುಗಳನ್ನು ಆಯಾ ಸದಸ್ಯರ ಇಚ್ಛೆಯ ಮೇರೆಗೆ ಆಯಾ ವಾರದ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಪಂಚಮ ಬಳಗಕ್ಕೆ ಸೇರಿರಿ, ಎಂದು ಕೋರುವ—

ನಿಮ್ಮ
**ದೇವನೂರ ಮಹಾದೇವ**
ವ್ಯವಸ್ಥಾಪಕ ಸಂಪಾದಕ
**ಪಂಚಮ ಪತ್ರಿಕೆ**

---

## ಸೀತಾಯಣ ವಿಶ್ಲೇಷಣೆ

(ಮೂರನೇ ಪುಟದಿಂದ)

ತಪಸ್ಸಿನ ಅಸ್ತ್ರವನ್ನು ಶಾಪವಾಗಿ ಪ್ರಯೋಗಿಸಿದ. ಇಲ್ಲಿ ಹೆಣ್ಣು ಗಂಡು ಪಕ್ಷಿಗಳನ್ನು ಕುರಿತು ಹೇಳುವಾಗ 'ಬಾರ್ಯ', 'ಪತಿ' ಎಂಬ ಪದಗಳು ಬಳಕೆಯಾಗಿರುವುದು ಅರ್ಥಪೂರ್ಣ. ತಾನು ಬರೆಯಲಿರುವ ರಾಮಾಯಣದ ಸೀತೆ, ರಾಮ, ಲಕ್ಷ್ಮಣ, ರಾವಣರಿಂದ ತುಂಬಿಹೋಗಿದ್ದ ವಾಲ್ಮೀಕಿಯ ಪ್ರಜ್ಞೆಗೆ ಅವು ಕ್ರೌಂಚ 'ಪತ್ನಿ' ಕ್ರೌಂಚ 'ಪತಿ'ಗಳಂತೆ ಕಂಡಿದ್ದರೇನಾಶ್ಚರ್ಯ. ಹಾಗೆ, ಶಾಪ ಕೊಟ್ಟ ಮರುಕ್ಷಣದಲ್ಲಿಯೆ ವಾಲ್ಮೀಕಿ "ಅಯ್ಯೋ ! ಆ ಹೆಣ್ಣು ಪಕ್ಷಿಯ ವಿಷಯವಾಗಿ ದುಃಖಿಸುತ್ತಿರುವ ನನ್ನಿಂದ ಎಂಥ ಕಠಿಣ ನುಡಿ ಹೊರಟಿತು" ಎಂದು ಪಶ್ಚಾತ್ತಾಪಗೊಳ್ಳುತ್ತಾನೆ. ಈ ಮೇಲಿನ ಮಾತುಗಳಲ್ಲಿ ವಾಲ್ಮೀಕಿಯ ಕರುಣೆ "ಒಟ್ಟಿಗೆ ಇದ್ದ ಪ್ರೇಮಿಗಳ ಅಗಲಿಕೆ"ಗಾಗಿ, ಹೆಣ್ಣು ಪಕ್ಷಿ "ಒಬ್ಬಂಟಿ" ಯಾದದ್ದಕ್ಕಾಗಿಯೂ, ಹರಿಯುತ್ತದೆ, ಕೇವಲ 'ರತಿಭಂಗಕ್ಕಾಗಿ ಮಾತ್ರವಲ್ಲ, ಎಂಬುದು ಗೋಚರಿಸುವುದಿಲ್ಲವೇ ? ಅಲ್ಲದೆ ಅವನಿಗೆ, ಬೇಡನಿಗೆ ಕೊಟ್ಟ ಶಾಪ 'ಕಠಿಣ ನುಡಿ' ಎಂಬ ಪರಿವೆಯೂ ಇದೆ. ಜೊತೆಗೆ ಆ ನುಡಿ ಛಂದೋಬದ್ಧವಾದ ಶ್ಲೋಕವಾಗಿರುವುದು ತಿಳಿಯುತ್ತಿದ್ದಂತೆ ಆಶ್ಚರ್ಯಗೊಳ್ಳುತ್ತಾನೆ. ನಂತರ ತಮಸಾನದಿಯಲ್ಲಿ ಸ್ನಾನಮಾಡಿ ಅದನ್ನೇ ಚಿಂತಿಸುತ್ತಾ ಆಶ್ರಮಕ್ಕೆ ಹಿಂತಿರುಗುತ್ತಾನೆ; ಬ್ರಹ್ಮನ ಆಗಮನವಾಗುತ್ತದೆ. ಆಗಲೂ "ಶಾಪಾರ್ಹವಾದ ಶ್ಲೋಕವು ನನ್ನ ಮುಖದಿಂದ ಹೊರಬಿದ್ದಿತಲ್ಲಾ" ಎಂದು ಚಿಂತಿಸುತ್ತಿದ್ದಾಗ, ಬ್ರಹ್ಮ, ಅದೇ ರಾಮಾಯಣ ರಚನೆಗೆ ಮೂಲವಾಗಲಿ, ಶ್ರೀರಾಮ ಚರಿತ್ರೆಯನ್ನು ರಚಿಸು-ಎಂದು ಹೇಳಿ ಹೋಗುತ್ತಾನೆ.

ರಾಮಮೂರ್ತಿಯವರೆನ್ನುವಂತೆ ಇಲ್ಲಿ "ಕೋಪ, ಶಾಪ, ತಾಪ"ಗಳಿವೆಯೆನ್ನುವುದು ನಿಜ; ಆದರೆ, ಅವರು ಇಲ್ಲ ಎನ್ನುವ "ಅನುತಾಪ"ಗಳೂ ಇವೆ. ಹಾಗೆಯೇ "ಹಿಂಸೆ", "ಕಾಮ" ಇವೆ ; ಅವರು ಇಲ್ಲ ಎನ್ನುವ "ಕರುಣೆ" "ಪ್ರೇಮ"ಗಳೂ ಇವೆ. ರಾಮಾಯಣದ ಹುಟ್ಟಿಗೆ ಕಾರಣವಾದ ಈ ಶ್ಲೋಕವು ಹುಟ್ಟಿದ ಸಂದರ್ಭ, ಅನೇಕ ಅರ್ಥಗಳ ಪದರಗನ್ನುಳ್ಳದ್ದಾಗಿದೆ. ವಾಲ್ಮೀಕಿಯ ಲೌಕಿಕ ಅನುಭವ ಅಥವಾ ಭಾವ, ಮುಂದೆ ಕಾವ್ಯಾನುಭವ ಅಥವಾ ರಸವಾಗಿ ಪರಿವರ್ತಿತವಾಗುವ ಪ್ರಕ್ರಿಯೆಯ ಸೂಚನೆಯೂ ಇಲ್ಲಿದೆ. ಹೀಗೆ ಅಲ್ಲವೆ ಕಾವ್ಯ ಹುಟ್ಟುವುದು? ಆದ್ದರಿಂದಲೇ ಅಲ್ಲವೆ, ಇಂಥ ಸಂಕೀರ್ಣತೆಯುಳ್ಳ ಈ ಶ್ಲೋಕ ಸಂದರ್ಭ ರಾಮಾಯಣ ಕಥೆಗೆ, ರಾಮಮೂರ್ತಿಯವರೆ ಹೇಳುವಂತೆ, ಸಾಂಕೇತಿಕ ಪ್ರತಿಮೆಯಾಗುವುದು.?



ಕೋಟೇಶ್ವರ ಮುದ್ರಣಾಲಯ, 407, 14ನೇ ಮೈನ್, ಸರಸ್ವತಿಪುರಂ, ಮೈಸೂರು-570009